# ಅಹಿಂಸಾ ಸ್ತ್ರೀ ಧರ್ಮ ಬೋಧೆ

೦ || ಏಳು ಮಾತಿನ ಗಿಳಿಯೆ | ಏಳು ಮುದ್ದಿನ ಕಣಿಯೆ || ೦
೦ || ಏಳು ಸದ್ಗುಣಮಣಿಯೆ | ಏಳು ಬೆಳಗಾಯಿತು || ೦

ಮಗಳೇ ಏಳು ಬೆಳಗಾಯಿತು. ಏಳುವಾಗ ಪಂಚನಮಸ್ಕಾರ ಮಂತ್ರವನ್ನು ಸ್ಮರಿಸುತ್ತಾ ಏಳು. ಎದ್ದು ಮುಖ ತೊಳೆದುಕೊಂಡು ಹಿರಿಯರಿಗೆ ನಮಸ್ಕಾರ ಮಾಡು. ಪಾಟ ಪುಸ್ತಕಗಳನ್ನು ತೆಗೆದು ಕೊಂಡು ಸಾಲೆಗೆ ಹೋಗು. ಸಾಲೆಯಲ್ಲಿ ಯಾರ ಸಂಗಡ ಜಗಳಾಡ ಬೇಡ. ಕಾಳಜಿಪೂರ್ವಕ ಕಲಿತುಕೊಳ್ಳಲಿಕ್ಕೆ ಪ್ರಯತ್ನ ಮಾಡು. ವ್ಯರ್ಥವಾಗಿ ಕಾಲ ಕಳೆಯಬೇಡ ಈಗ ನಿನಗೆ ಆರು ವರ್ಷಗಳಾದವು. ಇನ್ನು ಸ್ವಲ್ಪ ದಿವಸಗಳಲ್ಲಿ ಯೌವನವತಿಯಾಗುವೆ. ಆದ್ದರಿಂದ ವಿದ್ಯೆ ಯನ್ನು ಕಲಿತು ಬುದ್ಧಿವಂತಳಾಗು. ಮತ್ತ ತಾಯಿಯ ಕೈಯಲ್ಲಿ ಗೃಹ ಕೃತ್ಯಗಳನ್ನು ಪೂರ್ಣ ಲಕ್ಷವಿಟ್ಟು ಕಲಿ. ( ಮನೆಯ ಕೆಲಸ ) ವೈಗಳ್ಳಿಯಾಗಬೇಡ. ಸುಳ್ಳು ಮಾತಾಡಲಿಕ್ಕೆ ಕಲಿಯಬೇಡ. ಬಸ್ತಿಗೆ ಹೋಗುವದನ್ನು ಮರೆಯಬೇಡ. ದೊಡ್ಡವಳಾದ ನಂತರ ನಿನ್ನನ್ನು ಸರಿಯಾದ ವರನಿಗೆ ಕೊಟ್ಟು ಲಗ್ನ ಮಾಡುತ್ತಾರೆ.

**( ಗಂಡನ ಮನೆಯಲ್ಲಿ ಮಾಡುವ ಕಾರ್ಯಗಳು. )**

ಏಳು ಮಗಳೇ ಏಳು. ಮುಂಜಾನೆ ಎಲ್ಲರಗಿಂತ ಮೊದಲು ಏಳು. ಎದ್ದು ಕುಳಿತು ಪಂಚ ನಮಸ್ಕಾರ ಮಂತ್ರವನ್ನು ಜಪ ಮಾಡು.

ಆ ನಂತರ ನಾನು ಯಾರು, ನಾನು ಇಲ್ಲಿ ಯಾಕೆ ಬಂದೆನು. ಈ ಮನುಷ್ಯ ಜನ್ಮದಲ್ಲಿ ಬಂದು ಏನು ಮಾಡತಕ್ಕದ್ದು, ಮುಂದೆ ಇಲ್ಲಿಂದ ಎಲ್ಲಿ ಹೋಗತಕ್ಕವರಿದ್ದೇವೆ. ಇದೆಲ್ಲವನ್ನು ಸ್ವಲ್ಪ ಹೊತ್ತು ವಿಚಾರ ಮಾಡಿ 'ಓಂ ನಮಃ ಶಿದ್ಧೇಭ್ಯಾ' ಎಂದು ಏಳು. ಗಂಟು ಮೋರೆಯನ್ನು ಮಾತ್ರ ಹಾಕಬೇಡ. ಎಬ್ಬಿಸಿಕೊಳ್ಳಬೇಡ. ನಗು ಮೋರೆಯಿಂದ ಏಳು. ಎದ್ದು ಪತಿಯ ಪಾದಕ್ಕೆ ನಮಸ್ಕಾರ ಮಾಡಿ ಅತ್ತೆ ಮಾವಂದಿರು ಗುರುಹಿರಿಯರಿಗೆ ನಮಸ್ಕಾರ ಮಾಡಿ ನಿನ್ನ ಗೃಹಕೃತ್ಯದ ಕೆಲಸವನ್ನು ಮಾಡು. ಮುಂಜಾನೆ ಎದ್ದು ಮಲವಿಸರ್ಜನೆಗೆ ಹೋಗುವಾಗ ಮೈಲಿಗೆ ಸೀರೆಯನ್ನು ಉಟ್ಟುಕೊಂಡು ಹೋಗಬೇಕು. ಮಲವಿಸರ್ಜನೆಗೆ ಹೋಗಿಬಂದು ಒಳ್ಳೇ ಮಣ್ಣಿನಿಂದ ಮೂರು ಸಾರೆ ಕೈಯನ್ನು ಸ್ವಚ್ಛವಾಗಿ ತೊಳೆದುಕೊಂಡು ಮೈಲಿಗೆಯನ್ನು ಕಳೆದಿಟ್ಟು ಮನೆಯ ಕೆಲಸವನ್ನು ಮಾಡಬೇಕು.

## ಕಸವನುಡುಗು

**ತಂಗೀ**

ಮೊದಲು ಸಂದುಗೊಂದಿನ ಕಸವನ್ನು ಉಡುಗುವಾಗ ಸಣ್ಣ ಯಾವ ಪ್ರಾಣಿಗಳಿಗೆ ಬಾಧೆಯಾಗದಂತೆ ಎಚ್ಚರಿಕೆಯಿಂದ ಕಸವನ್ನು ಉಡುಗಬೇಕು. ಮಂಚ, ಖುರ್ಚಿ, ಬಾಕು, ಕಪಾಟು, ಮೊದಲಾದ ವುಗಳ ಮೇಲಿನ ಧೂಳವನ್ನು ಒರೆಸು. ಹೊಸ್ತಿಲವನ್ನು ಸಾರಣಿಯ ಮಾಡಿ ರಂಗೋಲಿಯನ್ನು ಹಾಕು. ಅಂಗಳದ ಕಸಗೂಡಿಸಿ ನೀರ ಚಳೆ ಹೊಡೆ. ಮಗಳೇ ಮನೆಯ ಸ್ವಚ್ಛತೆಯನ್ನು ಮಾಡುವದು ನಿನ್ನನ್ನೇ ಕೂಡಿದೆ.

# ಬೆಳಗುವ ಪಾತ್ರೆಯ

**ಕುವರೀ**

ಮೊದಲು ಬೆಳಗುವ ಪಾತ್ರೆಗಳನ್ನೆಲ್ಲ ಒತ್ತಟ್ಟಿಗೆ ಕೂಡಿಡು. ಹುಳಿ, ಬೂದಿ, ಹಚ್ಚಿ ಒಳ ಹೊರಗೆ ಥಳ ಥಳ ಬೆಳಗು. ಕುಡಿಯುವ ನೀರನ್ನು ಎರಡು ಪದರು ಸ್ವಚ್ಛನ್ನ ಬಿಳಿಯ ಅರಿವೆಯನ್ನು ಹಾಕಿ ಸೋಸು, ಸೋಸಿದ ಅರಿವೆಯನ್ನು ನೀರು ಎಲ್ಲಿಂದ ತಂದಿರುವಿಯೋ ಅಲ್ಲಿಗೆ ಆ ಜೀವಾವಳಿಯನ್ನು ಬಿಟ್ಟು ಬಾ. ಕಲಾಯಿ ಇಲ್ಲದ ಪಾತ್ರೆಗಳನ್ನು ಯಾವದಕ್ಕೂ ಉಪಯೋಗಿಸಬೇಡ. ಬಚ್ಚಲನ್ನು ಕಡ್ಡೀ ಕಸಬರಿಗೆಯಿಂದ ನಿತ್ಯವೂ ತಿಕ್ಕಿ ತೊಳೆ. ಒಂದು ದಿನ ತೊಳೆಯದಿದ್ದರೆ ಹೊಲಸು ನಾರುವದಲ್ಲದೆ ಜಾರಿ ಬೀಳುವ ಪ್ರಸಂಗವುಂಟು. ನಿತ್ಯವೂ ಬೆಣ್ಣೆಯನ್ನೂ, ಬೆಣ್ಣೆಯ ಪಾತ್ರೆಯನ್ನೂ ತೊಳೆ. ಇಲ್ಲದಿದ್ದರೆ ಅದು ಹೊಲಸು ನಾರುವದು. ಹಾಲು ಮೊಸರಿನ ಪಾತ್ರೆಗಳನ್ನು ಹಸನಾಗಿ ತಿಕ್ಕಿ ತೊಳೆ. ಪಾತ್ರೆಗಳಲ್ಲಿ ಅಡಿಗೆ ಮಾಡುವಾಗ ಅದಕ್ಕೆ ಬೂದಿ ಇಲ್ಲವೆ ಕೆಮ್ಮಣ್ಣನ್ನು ಹಚ್ಚಿ ಒಲೆಯ ಮೇಲೇರಿಸು, ಅಂದರೆ ಉರಿ ಬಡೆದು ಕಪ್ಪಾಗುವದಿಲ್ಲ, ಬೆಳಗುವದಕ್ಕೆ ಹಗುರಾಗುವದು.

# ಜಳಕ ಮಾಡು

**ತಂಗೀ**

ನಿತ್ಯವೂ ತಲೆಬಾಚಿಕೊಂಡು ಸ್ನಾನ ಮಾಡಬೇಕು. ಚಳಿಜ್ವರ, ಬೇನೆ ಬೇಸರಿಕೆ ಬಂದಾಗ ಎಂದೂ ಮಾಡಬೇಡ. ಸ್ನಾನದ ನೀರು ರಕ್ತ ಪ್ರಸಾರಕ್ಕೆ ಸಹಾಯ ಮಾಡುವದು. ಮೈಕೊಳೆಯಲ್ಲಾ ಹೋಗಿ ಆರೋಗ್ಯ ಹೆಚ್ಚುವದು. ಸ್ನಾನ ಮಾಡುವದೆಂದರೆ ಅದೊಂದು ಜುಲುಮೆಯ ಕೆಲಸದಂತೆ ಮಾಡಬಾರದು. ಸೀಗೆಕಾಯಿ ಅಂಟಾಳ-

ಕಾಯಿ ಕಡಲೆ, ಹೆಸರು, ಅಥವಾ ಹುರಳಿ ಹಿಟ್ಟು ಇಲ್ಲವೆ ಸಬಕಾರ ಹಚ್ಚಿ ಚೆನ್ನಾಗಿ ತಿಕ್ಕಿ ಸ್ನಾನ ಮಾಡಬೇಕು. ಮೈಲಿಗೆ ಅರಿವೆಗಳನ್ನು ಕಳೆದು ಇಡಬೇಕು. ಆಗಿಂದಾಗ್ಗೆ ಒಗೆದಿರಿಸಬೇಕು. ಬರಿಯ ಮೈಯಲಿ ಕೂತು ಸ್ನಾನ ಮಾಡಬೇಡ. ಕಾಲ ಮೇಲೆ ಅರಿವೆ ಚಲ್ಲಿ ಕೊಂಡು ಸ್ನಾನ ಮಾಡು. ಕದವ ಬಂಧಿಸದೆ ಎಂದೂ ಸ್ನಾನ ಮಾಡ ಬೇಡ. ಉಡುವ ಅರಿವೆ ಮರೆತು ಕೂಡ್ರಬೇಡ. ಹತ್ತರ ಇರಿಸಿ ಕೊಂಡು ಮೈಲಿಗೆ ಅರಿವೆ ದೂರ ಸರಿಸು. ಯಾರೂ ಇಲ್ಲದ ಸಮಯ ನೋಡಿ ಅರಿವೆ ಉಟ್ಟಿಕೊ. ನೀನು ಉಟ್ಟುಕೊಳ್ಳುವ ಅರಿವೆಗಳು ಮಡಿಯುವಿರಲಿ. ಅಂದರೆ ಅಡಿಗೆಯಲ್ಲಿ ಉಟ್ಟುಕೊಳ್ಳುವ ಬೇರೆ, ಊಟವಾದ ನಂತರ ಉಡುವ ಅರಿವೆ ಬೇರೆ, ಹೀಗೆ ಬಟ್ಟೆಗಳನ್ನು ಉಟ್ಟುಕೊಳ್ಳಬೇಕು. ಜಳಕ ಮಾಡಿ ಕುಂಕುಮವನ್ನು ಧರಿಸಲು ಮರೆಯಬೇಡ. ಮೈಲಿಗೆಯ ಸಲುವಾಗಿ ಒಂದು ಬೇರೆ ಬಟ್ಟೆ ಯನ್ನು ಮಾಡಿಟ್ಟು ಬಿಡು. ಯಾವತ್ತೂ ಉಡುವ ಬಟ್ಟೆಗಳನ್ನು ಸ್ವಚ್ಛವಾಗಿಟ್ಟುಕೊ. ನೀನು ಮುಟ್ಟಾದರೆ ನಾಲ್ಕು ದಿವಸ ಯಾರನ್ನೂ ಮುಟ್ಟುವದಕ್ಕೆ ಯೋಗ್ಯಳಲ್ಲ. ಆದ್ದರಿಂದ ನೀನು ನಾಲ್ಕು ದಿವಸ ಎಚ್ಚರಿಕೆಯಿಂದ ಕಾಲಕಳೆ.

## ಅಷ್ಟ ವಿಧಾರ್ಚನೆಯನ್ನು ನಿಷ್ಠೆಯಿಂದ ಮಾಡು

**ಮುದ್ದು ಮಗಳೇ ಏಳು**

|| ಅಷ್ಟ ವಿಧಾರ್ಚನೆ ಎಷ್ಟು ಮಾಡಿದರೇನು ||
|| ನಿಷ್ಠೆಯಿಲ್ಲದ ಅಷ್ಟ ವೇದಾರ್ಚನೆ ನಷ್ಟ-ಕಾಣಯ್ಯ ಸರ್ವಜ್ಞ

ನೀನು ಪ್ರತಿ ದಿವಸ ಜಿನಮಂದಿರಕ್ಕೆ ತಪ್ಪದೆ ಹೋಗು. ದರ್ಶನ ಪಾಠ ಕಲಿತು ದರ್ಶನ ಮಾಡು. ಅಷ್ಟ ವಿಧಾರ್ಚನೆ ನಿಷ್ಠೆಯಿಂದ ಮಾಡು. ಭಕ್ತಿಯೇ ಮುಕ್ತಿಗೆ ಕಾರಣವಾಗಿದೆ.

(ಸಮ್ಯಗ್ದರ್ಶನ,—ಜ್ಞಾನ— ಚಾರಿತ್ರಾಣಿ ಮೋಕ್ಷಮಾರ್ಗಃ) ಹೇಳಿದಂತೆ ಹದಿನೆಂಟು ದೋಷರಹಿತರಾದ ಜಿನೇಶ್ವರರಲ್ಲಿ ಪೂರ್ಣ ಭಕ್ತಿ ಮಾಡುವದು ಸಮ್ಯಗ್ದರ್ಶನವು. ಆದಿ ಜಿನೇಶ್ವರರ ಮುಖ ಕಮಲದಿಂದ ವಾಣಿ ಶಾಸ್ತ್ರದ ಮೇಲೆ ಭಕ್ತಿ ಮಾಡುವದೇ ಸಮ್ಯಗ ಜ್ಞಾನ. ಆ ಶಾಸ್ತ್ರದಲ್ಲಿ ಇದ್ದಂತೆ ನಡೆಯುವದೇ ಚಾರಿತ್ರ ಈ ಮೂರು ಕೂಡಿಯೇ ಮೋಕ್ಷಮಾರ್ಗ ಇವೆಲ್ಲವು ಮೋಕ್ಷ ಮಾರ್ಗದ ದಾರಿ ಒಂದೇ ಇರುತ್ತದೆ.

ಆದ್ದರಿಂದ ಜಿನಮಂದಿರಕ್ಕೆ ಹೋಗುವಾಗ ದಾರಿಯಲ್ಲಿ ಯಾರಾದರೂ ತವರ ಮನೆಯ ಸುದ್ದಿ, ಶೀರೆ ಕುಪ್ಪಸದ ಸುದ್ದಿ, ಅಡಿಗಿ ಸುದ್ದಿ, ಹಡೆದ ಸುದ್ದಿ, ಮಂದೀ ಸುದ್ದಿ, ಇನ್ನೂ ಅನೇಕ ಸುದ್ದಿ ಕೇಳಿಕೊಳ್ಳುತ್ತಾ ತಡ ಮಾಡಬೇಡ. ಉತ್ತಮವಾದ ಪೂಜಾ ಮಾಡು. ಜಿನಮಂದಿರದಲ್ಲಿ ಮನಸ್ಸಿನಿಂದ ದೇವರಿಗೆ ದರ್ಶನ ಮಾಡಿ ಅಷ್ಟ ವಿಧಾರ್ಚನೆ ಮಾಡಿಕೊಂಡು ತೀವ್ರ ಬಾ.

## ಅಡಿಗೆ ಮಾಡು

**ನನ್ನ ಮಗಳೇ,**

ಮನೆಯ ಜನರನ್ನು ನೋಡಿ ಅಕ್ಕಿ, ಬೇಳೆ, ಹಿಟ್ಟು ಅಡಿಗೆಗೆ ಬೇಕಾಗುವ ವಸ್ತುಗಳನ್ನು ತಯಾರಿಟ್ಟುಕೊಂಡು ಅಡಿಗೆಗೆ ಕೂಡ್ರು. ಯಾಕಂದರೆ ಮಡಿಯಿಂದ ಇರುವಿ. ಆದ ಕಾರಣ ಮುಟ್ಟುವ ಪ್ರಸಂಗ ಬರಬಾರದು. ನೀನು ಅಡಿಗೆ ಮಾಡುವಾಗ್ಗೆ ಕಟ್ಟಿಗೆ, ಕುಳ್ಳು ಬಹಳ ಎಚ್ಚರದಿಂದ ಶೋಧ ಮಾಡಿ ಉರಿ ಹಚ್ಚು. ಯಾಕಂದರೆ ಅದರಲ್ಲಿ ಅನೇಕ ಜೀವಿಗಳು ಇರುತ್ತವೆ. ಅವುಗಳನ್ನು ರಕ್ಷಿಸುವದು ನಿನ್ನನ್ನೇ ಕೂಡಿದೆ. ಯಾಕಂದರೆ ನಿರಾಧಾರ ಪ್ರಾಣಿಗಳನ್ನು ಕೇಳುವವರೇ ಇಲ್ಲ. ಕಾರಣಾ ತಂಗೀ, ನೀನು ಪ್ರಾಣಿಗಳ ಕಡೆಗೆ ಬಹಳ ಲಕ್ಷ ಕೊಡು. ಅದೇ ನಿನಗೆ ಮೋಕ್ಷ ಮಾರ್ಗ. ಅಲಕ್ಷ ಎಂದೂ ಮಾಡಬೇಡ. ಪ್ರಾಣಿ-

ಗಳ ಮೇಲೆ ದಯಾ ಮಾಡುವದು ಧರ್ಮವೆಂದು ತಿಳಿದು ಎಚ್ಚರ ದಿಂದ ಅಡಿಗೆ ಮಾಡು. ಅಡಿಗೆ ಮಾಡುವ ಮೊದಲು ಒಲೆಯನ್ನು ಸಾರಣಿ ಮಾಡು. ಒಲೆಯನ್ನು ಸಾರಿಸದೆ ಎಂದೂ ಅಡಿಗೆ ಮಾಡ ಬೇಡ. ಒಲೆಯ ಮುಂದೆ ಒಂದು ಮಣೆಯನ್ನು ಹಾಕಿ ಅದರ ಮೇಲೆ ಕುಳಿತು ಅಡಿಗೆ ಮಾಡು. ಅಂದರೆ ಸೀರೆಯು ಮಾಸುವದಿಲ್ಲ. ಮಸಿ, ಹಿಟ್ಟು, ತೇವದ ಕೈ ಸೀರೆಗೆ ಹಚ್ಚಿಕೊಳ್ಳಬೇಡ. ಒಂದು ಮಸಿ ಅರಿವೆ ಹತ್ತಿರ ಇರಲಿ. ಅಡಿಗೆ ಮಾಡುವಾಗ ಹೊಗೆ ಆಗದಂತೆ ನೋಡಿಕೋ. ಕೂತಲ್ಲೇ ಕೂಡ್ರಬೇಡ, ಅಡ್ಡಾಡಿ ಬಡುಕು ಮಾಡು. ಅಡಿಗೆ ಮಾಡು ವಾಗ ಬೇಸರಗೊಳ್ಳಬೇಡ. ಬೇಸರಗೊಂಡರೆ ಅಡಿಗೆಯ ರುಚಿಯೇ ಕೆಡುವದು. ಹುಳಿ, ಉಪ್ಪು, ಕಾರ, ಮಸಾಲೆ ಎಣ್ಣೆ ಮುಂತಾದವು ಹೆಚ್ಚು ಕಡಿಮೆ ಆಗದಂತೆ ಸಮನಾಗಿ ಹಾಕಿ ರುಚಿಯಾಗುವಂತೆ ಸಾರು, ಪಲ್ಯೆ ಮುಂತಾದವುಗಳನ್ನು ಮಾಡು. ಒಗ್ಗರಣೆ ಕಮರಾಗ ದಂತೆ, ಅನ್ನ ಹೊತ್ತದಂತೆ ನೋಡಿಕೋ ?

ಮಗಳೇ, ನಿನಗೆ ಕೆಲ ಕೆಲವು ಮಹತ್ವದ ಅಡಿಗೆಗಳನ್ನು ಹೇಳು ವೆನು ಕೇಳು. ಅವುಗಳನ್ನು ಕಲಿತು ಜಾಣೆ ಆಗು. ಹೆಣ್ಣು ಮಕ್ಕಳಿಗೆ ಅಡಿಗೆಯ ವಿದ್ಯೆಯು ಬಹಳ ಮಹತ್ವದ್ದು ಬಲ್ಲೆಯಾ ? ಎಳ್ಳು ಹಚ್ಚಿದ ತೆಳ್ಳನ್ನ ಸಜ್ಜೆಯ ರೊಟ್ಟಿ, ಬಿಳಿ ಜೋಳದ ರೊಟ್ಟಿ, ಚಪಾತಿ, ಜೋಳ ಕುಟ್ಟಿದ ಬುತ್ತಿ, ಉಪ್ಪಿನಕಾಯಿ, ಹುಳಿ ಅನ್ನ, ಚಿತ್ರಾನ್ನ, ಕಲುಸು ಬುತ್ತಿ ಕೆಂಪು ಚಟ್ನಿ ಕೊರೆದ ಕಡ್ಲಿ ಹಿಟ್ಟಿನ ವಡಿ, ಮಜ್ಜಿಗೆ ಸಾರು, ಮರಗಿದ ಚಟ್ನಿ, ಕಾಯ ಚಟ್ನಿ, ದೋಸೆ, ಇಡಲಿ, ಇವೇ ಮೊದಲಾದ ನಿತ್ಯದ ಅಡಿಗೆಗಳನ್ನು, ಮತ್ತು ಹಬ್ಬ ಹುಣ್ಣಿವೆಗಳಲಿ ಮಾಡಬೇಕಾದ ಹೋಳಿಗೆ, ಕಡಬು, ಪಾಯಸ, ಪುರಿ, ಬಾಸುಂದೆ, ಶ್ರೀಖಂಡ, ಜಿಲೇಬಿ, ಬುಂದಿ, ಮೊದಲಾದ ಸಿಹಿ ಅಡಿಗೆಗಳನ್ನು, ಬೇಸನ್ನದಳಿ, ಮೈಸೂರಪಾಕ, ಚಿವಡಾ, ಕಾರ ಹಚ್ಚಿದ ಅವಲಕ್ಕಿ, ಮೊದಲಾದ ಫರಾಳದ ಜೀನಸುಗಳನ್ನು ಕಲಿ. ಇವೆಲ್ಲ ಅಡಿಗೆಗಳನ್ನು

ಅನುಭವಿಕರಾದ ಯಜಮಾನಿ ಹೆಣ್ಣು ಮಕ್ಕಳನ್ನು ಕೇಳಿ ಕಲಿ. ನಳ ಪಾಕ ಶಾಸ್ತ್ರ (ಅಡಿಗೆಯ ವಿಧಾನ) ಸೂಪ ಶಾಸ್ತ್ರ ಮೊದಲಾದವು ಗಳನ್ನು ತರಿಸಿ ಓದು.

ಮಗಳೇ ನೀನು ಕಲಿಯಬೇಕಾದ ಇನ್ನೂ ಕೆಲವು ಜಿನಸು ಗಳುಂಟು. ಶಾವಿಗೆ, ಗುಳಿಗೆ, ಶೌತಿ ಬೀಜ, ಉಗರೊತ್ತು, ಹಪ್ಪಳ, ಶಂಡಿಗೆ, ಮಂಡಿಗೆ, ಮಾವಿನಕಾಯಿ-ಗುಳಂಬ, ನೆಲ್ಲೀಕಾಯಿ-ಗುಳುಂಬ, ಹಾಲು ಗುಳುಂಬ-ಪಾಕ, ಶಂಡಿಗೆ ಗುಂಬಳ ಪಾಕ, ಮೊದಲಾದ ಇಟ್ಟು ತಿನ್ನುವ ಜೀನಸುಗಳನ್ನು ಕಲಿ.

ಅಡಿಗೆಯ ವಿದ್ಯೆಯನ್ನು ಮರೆತು ಕೇವಲ ಶಾಲೆಯ ವಿದ್ಯೆ ಯನ್ನು ಕಲಿತರೆ ಫಲವಿಲ್ಲ. ಅಡಿಗೆ ಕಲಿಯದ ಹೆಣ್ಣು ಮಕ್ಕಳ ಪಾಡು ಗಂಡನ ಮನೆಯಲ್ಲಿ ಬಹಳ ತ್ರಾಸವಾಗುವದು. ಕಂಡ ಕಂಡವರೆಲ್ಲ ನಗುವರು. ಅಡಿಗೆ ಬಾರದ ಗಂಡು ಗೂಳಿ ಎಂದು ಹಾಸ್ಯ ಮಾಡು ವರು. ಆದ ಕಾರಣ ನೀನು ತಪ್ಪದೆ ಅಡಿಗೆಯ ವಿದ್ಯೆಯನ್ನು ನಿನ್ನ ತಾಯಿಯ ಕೈಯಲ್ಲಿ ಕಲಿ, ತಪ್ಪಬೇಡ.

## ಅಡಿಗೆ ಆದ ನಂತರ ಮಾಡುವ ಕಾರ್ಯಗಳು

**ಕುವರೀ,**

ಇನ್ನು ಅಡಿಗೆ ಆದ ನಂತರ ಸತ್ಪಾತ್ರ ದಾನವನ್ನು ತೀವ್ರ ಹುಡುಕು ಲಗುಬಗೆಯಿಂದ ಬಾಗಿಲಲ್ಲಿ ನಿಂತುಕೊಳ್ಳು. ದಿಗಂಬರ ಮುನಿ, ಅರ್ಜಿಕಾ, ಕ್ಷುಲ್ಲಕ, ಕ್ಷುಲ್ಲಕಿಯರು ಇವರಲ್ಲಿ ಯಾರಾದರು ಅಕಸ್ಮಾತಾಗಿ ಸಿಕ್ಕರೆ ಅವರಿಗೆ ನವಧಾ ಭಕ್ತಿಯಿಂದ ಆಹಾರ ದಾನ ಕೊಡು. ಆಹಾರ ಕೊಡುವಂಥ ದಾನವು ಜಗತ್ತಿನಲ್ಲಿ ಬೇರೆ ಯಾವದೂ ಇಲ್ಲ. ಕಾರಣ ಅನ್ನದಾನ ಕೊಡುವ ಪದ್ಧತಿಯನ್ನು ಮಾತ್ರ ಮರೆಯಬೇಡ.

ಅನ್ನವನು ಹಾಕುವದು | ನನ್ನಿಯನು ನುಡಿಯುವದು ||
ತನ್ನಂತೆ ಪರರ ಬಗೆದೊಡೆ | ಕೈಲಾಸ ಬಿಣ್ಣನ ವಕ್ಕು ಸರ್ವಜ್ಞ ||

ಎಂಬ ವಾಕ್ಯವು ಸುಳ್ಳಲ್ಲವ್ಮಾ ! ಅನ್ನದಾನದ ವರ್ಣನೆಯನ್ನು ಎಷ್ಟು ಹೇಳಲಿ, ಹಿಂದಕ್ಕೆ ಸೀತೆಯು ಅರಣ್ಯವಾಸದಲ್ಲಿದ್ದಾಗ ಆಕೆಯು ಫಲಗಳನ್ನು ತಿಂದು ಜೀವಿಸುತ್ತಿದ್ದರೂ, ಆಕೆಯು ಇದ್ದದ್ದರಲ್ಲಿ ಮುನಿಗಳಿಗೆ ದಾನ ಕೊಡದ ಹೊರ್ತು ಬಾಯಲ್ಲಿ ನೀರು ಹಾಕುತ್ತಿದ್ದಿಲ್ಲ. ಆಹಾರ ಕೊಡುವದು ಒತ್ತಟ್ಟಿಗಿರಲಿ, ಆಹಾರ ಕೊಡುವದನ್ನು ಮುಂಗಲಿ ಮಂಗಗಳು ಸಂತೋಷದಿಂದ ನೋಡಿದ್ದರಿಂದ ಅವುಗಳಿಗೆ ಸ್ವರ್ಗ ಮೋಕ್ಷನಾಯಿತು, ಆಹಾರ ದಾನವು ಬಹಳ ಮಹತ್ವದ್ದಿದೆ. ಆದ್ದರಿಂದ ಆ ದಾನವನ್ನು ಮರೆಯಬೇಡ.

ಅನ್ನವು ಜೀವಕ್ಕೆ ಆಧಾರವಾದದ್ದುದರಿಂದ ಸತ್ಪಾತ್ರ ದಾನವನ್ನು ಮಾಡುತ್ತಿರು. ಅನ್ನದಾನ ಮಾಡುವಾಗ್ಗೆ ಬಹಳ ಎಚ್ಚರದಿಂದ ಮಾಡುವದನ್ನು ಕಲಿ. ಅನ್ನವನ್ನು ತೆಗೆದುಕೊಳ್ಳುವ ತ್ಯಾಗಿಗಳು ಯಾವ ವಯುಸ್ಸಿನವರು ಇರುವರು, ರೋಗಿಗಳೋ, ನಿರೋಗಿಯೋ ಅವರ ಬಾಯಲ್ಲಿ ಹಲ್ಲು ಇರುವವೋ, ಅಥವಾ ಇಲ್ಲವೋ ಅವರದು ಏನು ತ್ಯಾಗ ಇರುತ್ತದೆ ಇವೆಲ್ಲವನ್ನು ಮೊದಲೇ ತಿಳಿದಿರಬೇಕು. ಈಗ ಯಾವ ಋತು ಇರುತ್ತದೆ. ಯಾವ ಫಲ ಈಗ ಬಂದಿರುತ್ತದೆ ಇದೆಲ್ಲಾ ಗೊತ್ತು ಮಾಡಿಕೊಂಡು ಆಹಾರ ಕೊಡಬೇಕು. ಆಹಾರ ಕೊಡುವ ಕಾಲಕ್ಕೆ ಗಡಿಬಿಡಿ ಮಾಡಿ ಒಂದು ಕೊಟ್ಟು ಒಂದು ಮರಿಯಬೇಡ, ಮರೆತರೆ ನಿನ್ನ ಜೀವಕ್ಕೆ ಹಳಿಹಳಿ ಮಾಡಿಕೊಳ್ಳಬೇಕಾಗುತ್ತದೆ. ಆಹಾರ ಕೊಡುವವರು ಮಕ್ಕಳಿಗೆ ಉಣ್ಣಿಸಿದಂತೆಯೋ ಇರುತ್ತದೆ. ಮಕ್ಕಳ ಹೊಟ್ಟೆ ತುಂಬುವತನಕ ಹ್ಯಾಗಾದರೂ ಮಾಡಿ ಗುಬ್ಬಿ ನೋಡು, ಕಾಗೆ ನೋಡು, ಚಂದ್ರನನ್ನು ನೋಡು ಎಂದು ಹ್ಯಾಗೆ ಮಕ್ಕಳನ್ನು ಉಣ್ಣಿಸುತ್ತಾರೊ ? ಅದೇ ರೀತಿಯಿಂದ ಉಲ್ಲಾಸದಿಂದ ಭಕ್ತಿಯಿಂದ ಆಹಾರ ದಾನ ಕೊಡು, ಆಹಾರ ದಾನ, ಔಷಧದಾನ,

ಅಭಯದಾನ, ಶಾಸ್ತ್ರದಾನ ಈ ನಾಲ್ಕು ದಾನಗಳು ಜೈನ ದಿಗಂಬರರಲ್ಲಿ ಪ್ರಸಿದ್ಧಿಯನ್ನು ಹೊಂದಿವೆ, ಕಾರಣ ನಾಲ್ಕು ದಾನಗಳನ್ನು ನಿನ್ನ ಯೋಗ್ಯತಾನುಸಾರವಾಗಿ ಕೊಡುವದನ್ನು ಕಲಿಯಬೇಕು.

## ಊಟಕ್ಕೆ ಬಡಿಸು

**ಕುಮುದಿನಿಯೇ,**

ಊಟಕ್ಕೆ ಬಡಿಸುವ ಮೊದಲು ಹಸನಾದ ಮಡಿ ಉಟ್ಟು ಕೊಂಡು ಝಳ ಝಳ ಮುಖ ತೊಳೆದುಕೊಂಡು ಕುಂಕುಮ ಬಟ್ಟು ಇಟ್ಟುಕೊಂಡು ಕುಲು ಕುಲು ನಗುತ್ತಾ, ಬಡಿಸು. ಮಣೆ, ತಾಟು, ಹಾಕಿ ನೀರು ತುಂಬಿ ಬಟ್ಟಲ ಮುಚ್ಚಿಡು. ಮೊದಲು ದೇವರಿಗೆ ನೈವೇದ್ಯ ಮಾಡು, ಆ ಮೇಲೆ ಅತ್ತೆ ಮಾವಂದಿರಿಗೆ ಊಟಕ್ಕೆ ಬಡಿಸು, ಪತಿ ದೇವರಿಗೆ ಊಟಕ್ಕೆ ಬಡಿಸು, ಭಾವ ಮೈದುನ ಮಕ್ಕಳಿಗೆ ಊಟಕ್ಕೆ ಬಡಿಸು, ಎಲ್ಲರಿಗೂ ಒಂದೇ ತೆರನಾಗಿ ಬಡಿಸು. ಪಂಕ್ತಿ ಭೇದ ಮಾಡಬೇಡ. ಅರಹೊಟ್ಟೆ ಊಟಕ್ಕೆ ಹಾಕಬೇಡ. ಕಿಟ ಕಿಟ ಹಚ್ಚಬೇಡ. ಲಗು ಲಗು ನೀಡು, ತಡ ಮಾಡಬೇಡ. ಊಟದಲ್ಲಿ ಹಳ್ಳು, ಭತ್ತ, ಕಡ್ಡಿ, ಕೂದಲು ಬರದಂತೆ ನೋಡಿಕೋ. ಮಾಡಿದಡಿ-ಗೆಯ ಬಾಯಿ ತೆರೆದಿಡಬೇಡ. ಅತಿಥಿಗಳು ಬಂದರೆ ಭಕ್ತಿಯಿಂದ ಊಟ ಬಡಿಸು. ಆಳು ಮಕ್ಕಳಿಗೆ ಹಳಿಸಿದ್ದು, ಒಣಗಲ ಮುಂತಾ ದದ್ದು ನೀಡಬೇಡ. ಅವರನ್ನು ಮಕ್ಕಳಂತೆ ಕಾಣು. ಭಿಕ್ಷುಕರಿಗೆ ಇದ್ದದ್ದು ನೀಡಿ ಕಳಿಸು. ಇಲ್ಲೆನ್ನಬೇಡ. ಕೊಡುಗೈ ನೀನಾಗು. ಕುರುಡ, ಕುಂಟ, ಅನಾಥರನ್ನು ಕಂಡರೆ ಮರಗು. ಅವರಿಗೆ ಇಲ್ಲೆನ್ನಬೇಡ.

# ಊಟ ಮಾಡು

**ನನ್ನ ರತ್ನದ ಮಣಿಯೇ,**

ಹಸಿವೆ ಇಲ್ಲದೆ ಊಟ ಮಾಡಬೇಡ. ಹಸಿದು ಉಣ್ಣು. ಅಂದರೆ ರುಚಿಯಾಗುವದು. ಹಸಿದು ಬಹಳ ಹೊತ್ತಿರಬೇಡ. ಇದರಿಂದ ಕಸಿವಿಸಿಯಾಗಿ ಪಿತ್ತ ಹೆಚ್ಚಾಗುವದು. ಬಹಳ ಬಿಸಿ ಬಿಸಿ ಉಣ್ಣಬೇಡ. ಹಳಸಿದನ್ನ, ಪಲ್ಲೆ, ಉಣ್ಣಬೇಡ. ಹುಳಿ, ಉಪ್ಪು, ಖಾರ, ಮಸಾಲೆ, ಎಣ್ಣೆ, ಬೆಲ್ಲ, ಅತಿಯಾಗಿ ಸೇವಿಸಬೇಡ. ಹುಳಿ ಮೊಸರು ತಿನ್ನಬೇಡ. ಮೊಸರಿನಗಿಂತಲೂ ಮಜ್ಜಿಗೆ ಆರೋಗ್ಯಕರವೆಂದು ತಿಳಿ. ಎಲ್ಲ ಆಹಾರವನ್ನು ಮಿತಿಯಿಂದ ಉಣ್ಣುವದಕ್ಕೆ ಕಲಿ. ಊಟಕ್ಕೆ ಒಬ್ಬಳೇ ಕೂಡ್ರಬೇಡ, ಕತ್ತಲಲ್ಲಿ ಕೂಡ್ರಬೇಡ. ಗಸಕ್ಕನೆ ನೆಲದ ಮೇಲೆ ಕೂಡ್ರಬೇಡ, ನೆಲದ ಮೇಲೆ ರೊಟ್ಟಿ, ಹಪ್ಪಳ, ಕಾಯಿಪಲ್ಲೆ ಮೊದಲಾದವುಗಳನ್ನು ಚೆಲ್ಲಬೇಡ. ಊಟಕ್ಕೆ ಕೂತವರ ಕಡೆಗೆ ರೊಟ್ಟಿ, ಹಪ್ಪಳ, ಉಂಡಿ, ಮುಂತಾದವನ್ನು ತೂರಿ ಒಗೆಯಬೇಡ. ಇನ್ನು ಮನೆಯಲ್ಲಿ ಒಬ್ಬರಿಗೊಬ್ಬರಿಗೆ ಮಾತಿನ ವ್ಯತ್ಯಾಸವಾಗಿ ಸಿಟ್ಟು ಬರುವದುಂಟು. ಹಾಗೆ ಸಿಟ್ಟು ಬಂದರೆ ಊಟ ಬಿಡಬೇಡ. ಆರೋಗ್ಯ ಕೆಡುವದು. ಗಡಿಬಿಡಿಯಿಂದ ಊಟ ಮಾಡಬೇಡ. ಪತಿಯು ಉಣ್ಣದ ಮೊದಲು ನೀನು ಉಣ್ಣುವದು ತರವಲ್ಲ. ಉಣ್ಣುವದರೊಳು ಕೆಲಸ ಇಟ್ಟು ಕೊಳ್ಳಬೇಡ, ಇದರಿಂದ ಆಯಾಸವಾಗುವದು. ಉಂಡಮೇಲೆ ಒಂದೆ-ರಡು ತಾಸು ಪೂರ್ಣ ವಿಶ್ರಾಂತಿ ತೆಗೆದುಕೋ. ಇದರಿಂದ ದಣಿವು ಆಗದು. ಅತಿ ತ್ರಾಸಾದರೆ ಮಧ್ಯಾಹ್ನದಲ್ಲಿ ಮಲಗು. ಆದರೆ ದಿನವೂ ಮಲಗುವ ಚಟವನ್ನು ಕಲಿಯಬೇಡ. ಮಲಗಿದರೆ ಹೊತ್ತು ಮುಳುಗುವವರೆಗೆ ಮಲಗಬೇಡ. ನಿದ್ದೆ ನಿನ್ನ ಕೈಯೊಳಗಿರಲಿ.

# ಕುಟ್ಟು ಮತ್ತು ಬೀಸು

ನನ್ನ ಮಗಳೇ,

ಕುಟ್ಟುವದು ಬೀಸುವದು ಇವು ದೊಡ್ಡ ಕೆಲಸಗಳು. ಈ ಕೆಲಸಗಳಲ್ಲಿ ಬಹಳ ಜಾಗ್ರತೆಯಿಂದ ಕೆಲಸ ಮಾಡು. ಬೀಸುವ ಮೊದಲು ಕಲ್ಲನ್ನೂ ತಿರುವಬೇಡ. ಯಾಕಂದರೆ ಕಲ್ಲಿನಲ್ಲಿ ಸಣ್ಣ ಸಣ್ಣ ಇರಿವೆ ಹುಳಗಳು ಇರುತ್ತವೆ. ಕಾರಣ ಸಾವಕಾಶವಾಗಿ ಕಲ್ಲನ್ನು ಎತ್ತಿ ಯಾವ ಪ್ರಾಣಿಗಳಿಗೆ ಬಾಧೆಯಾಗದಂತೆ ಕಲ್ಲನ್ನೂ ಹೊಡೆದುಕೊಂಡು ಸುತ್ತಲೂ ಯಾವ ಪ್ರಾಣಿ ಬರದಂತೆ ನೋಡಿಕೊಂಡು ಬೀಸು. ಮತ್ತು ಕುಟ್ಟುವಾಗಾದರೂ ಯಾವ ಪ್ರಾಣಿಗೆ ಧಕ್ಕೆ ಹತ್ತದಂತೆ ಎಚ್ಚರಿಕೆಯಿಂದ ಕೆಲಸ ಮಾಡು. ಸಂಸಾರದಲ್ಲಿ ಪ್ರಾಣಿ ರಕ್ಷಣ ಮಾಡುವ ಭಾರ ನಿನ್ನ ಮೇಲೆಯೇ ಇರುತ್ತದೆ. ಯಾಕಂದರೆ ಕಸ ಉಡುಗುವದೂ, ಕುಟ್ಟುವದೂ, ಬೀಸುವದೂ, ನಿನ್ನನ್ನೇ ಕೂಡಿದೆ. ಅಂದ ಮೇಲೆ ಆ ಭಾರವೆಲ್ಲ ನಿನ್ನ ಮೇಲೆ ಇರುತ್ತದೆ. ತಂಗೀ ನಿನಗೆ ಇನ್ನೊಂದು ಮಾತು ಹೇಳುತ್ತೇನೆ ಕೇಳು. ಜೋಳವನ್ನೂ, ಗೋದಿಯನ್ನೂ, ಗಿರಣಿಗೆ ಮಾತ್ರ ಕೊಡಬೇಡ. ಯಾಕಂದರೆ ಗಿರಣಿಯಲ್ಲಿ ಧಾನ್ಯದ ಸತ್ವವೆಲ್ಲಾ ಸುಟ್ಟು ಹೋಗುತ್ತದೆ. ಕಾರಣಾ ಸರ್ವಥಾ ಗಿರಣಿಯ ಸಲಿಗೆ ಬೇಡ. ಗಿರಣಿಗೆ ಅನೇಕ ಜನರು ಬರುತ್ತಾರೆ. ಕೆಲವರು ಜೋಳವನ್ನು ಹಸನ ಮಾಡದಲೇ ತಂದಿರುತ್ತಾರೆ. ಕಾರಣ ಒಬ್ಬರ ಹಿಟ್ಟು ಒಬ್ಬರಿಗೆ ಬಂದೇ ಬರುತ್ತದೆ. ಕಾರಣಾ ಸರ್ವಥಾ ಗಿರಣಿಗೆ ಹೋಗಬೇಡ. ಆದಷ್ಟು ಬೀಸಲಿಕ್ಕೆ ಕಲಿಯಿರಿ. ಕುಟ್ಟುವದು ಬೀಸುವದು, ಹಿಂಡುವದು, ಕಡಿಯುವದು, ನೀರು ಜಗ್ಗುವದು, ಮೊದಲಾದ ಗಟ್ಟಿ ಕೆಲಸ ಮಾಡು. ಅಂದರೆ ಮೈ ಕೈ ಗಟ್ಟಿ ಆಗುವದು. ಮಧ್ಯಾಹ್ನದಲ್ಲಿ ಕಾಳು ಕಡಿ ಹಸನ ಮಾಡಿಟ್ಟುಕೋ. ಸಾಮಾನುಗಳನ್ನು ವ್ಯವಸ್ಥೆಯಿಂದ ಇಟ್ಟುಕೋ. ಹರವ ಬೇಡ, ಕೈ ಹಾಕಿದ

ಕೂಡಲೇ ಸಾಮಾನು ಸಿಗುವಂತೆ ಸಾಮಾನದ ಮೇಲೆ ಹೆಸರು ಬರೆದು ಇಟ್ಟುಕೋ, ಅಂದರೆ ತೀವ್ರ ಕೈಗೆ ಸಿಗುವವು. ಕಾಳು ಕಡಿಗೆ ಹುಳ ಆಗದಂತೆ ವ್ಯವಸ್ಥೆಯಿಂದ ಇಡು.

## ಮಿತವ್ಯಯ ಮಾಡು

**ಎಲೆ ಜಾಣೆ,**

ಮನೆಯಲ್ಲಿಯ ಸಾಮಾನುಗಳನ್ನು ಮಿತವಾಗಿ ಬಳಸು. ಬೆಲ್ಲ, ತುಪ್ಪ, ಸಕ್ಕರೆ, ಮುಂತಾದವುಗಳನ್ನು ನಾಳೆಗಿರಲೆಂದು ಕೂಡಿಡು. ಪತಿಯು ನಾಲ್ಕು ಮಂದಿಯನ್ನು ಹೊರಗಿನಿಂದ ಕರಕೊಂಡು ಬಂದಾಗ ಅದು ಇಲ್ಲ, ಇದು ಇಲ್ಲವೆಂದು ಅನ್ನಬೇಡ, ಗಂಡನಿಗೆ ಗೊತ್ತಾಗದಂತೆ ತರಿಸಿ ಇಟ್ಟುಕೋ. ಮನೆಗೆ ಬೇಕಾಗುವ ಪ್ರತಿಯೊಂದು ಸಾಮಾನುಗಳನ್ನು ಮುಂಜಾಗ್ರತೆಯಿಂದ ತರಿಸಿ ಇಟ್ಟುಕೊಳ್ಳುವದು ನಿನ್ನ ಕರ್ತವ್ಯ. ಹಿಟ್ಟು, ಅಕ್ಕಿ, ಬೇಳೆ, ಮಸಾಲೆ ಚಟ್ನಿ, ಮೊದಲಾದ ಜಿನಸು ಆಗಾಗ್ಗೆ ತಯಾರ ಮಾಡಿಕೋ. ಮುನ್ನಾ ದಿನವೇ ತರಕಾರಿ, ಲಿಂಬೇಹಣ್ಣು, ಕರಿಬೇವು, ಕೋತಂಬರಿ, ಟೆಂಗಿನಕಾಯಿ, ಹಸಿ ಮೆಣಸಿನಕಾಯಿ ವಗೈರೆ ತರಿಸಿ ಇಟ್ಟುಕೋ. ಸಜ್ಜಕ, ಅವಲಕ್ಕಿ, ಅಕ್ಕಿ, ರವೆ, ಗೋದಿ ರವೆ, ಜುನಕದ ಹಿಟ್ಟು, ಮೆಂತೇದ ಹಿಟ್ಟು, ಗೋದಿ ಹಿಟ್ಟು, ಅಕ್ಕಿ ಹಿಟ್ಟು ಯಾವಾಗಲೂ ತಯಾರಿಡು. ಗಂಡನ ಆದಾಯ ನೋಡಿ ವೆಚ್ಚ ಮಾಡು. ಗಳಿಕೆಗಿಂತ ಬಳಿಕೆ ಹೆಚ್ಚು ಮಾಡಬೇಡ, ಗಳಿಕೆ ಗಂಡನದು, ಉಳಿಕೆ ಹೆಂಡತಿಯದು.

## ಚಹ ಕುಡಿಯಬೇಡ

**ನೂತನ ಮಗಳೇ,**

ಚಹ, ಕಾಫೀ, ಕುಡಿಯಬೇಡ. ಇವು ಹಸಿವೆಯನ್ನು ಕೆಡಿಸುವವು. ದೇಹವನ್ನು ಒಣಗಿಸುವದು. ಇವುಗಳ ಚಟವು ಬಹು ಕೆಟ್ಟ

ಕಲಿತ ಮೇಲೆ ಬಿಡಲಿಕ್ಕಾಗುವದಿಲ್ಲ. ಬರಿಯ ಹೊಟ್ಟೆಯಲ್ಲಿ ಕುಡಿದರೆ ಪಿತ್ತ ಹೆಚ್ಚಾಗುವದು. ಕಾರಣ ಕುಡಿಯುವ ಚಟವೇ ಬಿಡು. ಅದು ರಕ್ತವನ್ನು ಸುಡುತ್ತದೆ. ಅದನ್ನು ಬಿಟ್ಟು ಬಿಡು,

## ನಿದ್ದೆಗೆಡಬೇಡ

**ತಂಗೀ,**

ಸಂಜೆಮುಚ್ಚಂಜೆಗೆ ನಿದ್ದೆ ಹೋಗಬೇಡ, ರಾತ್ರಿ ನಿದ್ದೆಗೆಡಬೇಡ. ನಿದ್ದೆ ಬಂದರೆ ತಡೆಗಟ್ಟಬೇಡ. ನಿದ್ದೆಯಂಥಾ ಔಷಧವಿಲ್ಲ. ಹಗಲು ದಣಿದ ಶರೀರವು ರಾತ್ರಿ ನಿದ್ದೆಯಿಂದ ವಿಶ್ರಾಂತಿ ಹೊಂದುವದು. ಎಷ್ಟು ನಿದ್ದೆ ಆದೀತು, ಅಷ್ಟು ದೇಹಕ್ಕೂ ಮನಸ್ಸಿಗೂ ವಿಶ್ರಾಂತಿ, ರೋಗಿಗ-ಳಿಗೆ, ತಲೆ ಕೆಟ್ಟವರಿಗೆ, ಮಕ್ಕಳಿಗೆ ನಿದ್ದೆ ಆಗದಿದ್ದರೆ ಕಷ್ಟ ಹೆಚ್ಚಾಗುವದು. ತಗಣಿ, ಚಿಕ್ಕಾಡು, ಡೋಮಿ, ಮೊದಲಾದ ಕ್ರಿಮಿ ಕೀಟಗಳ ಬಾಧೆಯಿಂದಲೂ, ಭಯ, ಗದ್ದಲ, ವ್ಯಸನಗಳ ತಾಪತ್ರಯದಿಂದಲೂ ನಿದ್ದೆ ಕೆಡುವದು. ಇವುಗಳ ಬಾಧೆಯನ್ನು ಆದಷ್ಟು ರೀತಿಯಿಂದ ತಪ್ಪಿಸಿಕೊಂಡು ನಿದ್ದೆ ಮಾಡಬೇಕು. ನಿದ್ದೆ ಕೆಟ್ಟರೆ ಅಜೀರ್ಣ, ಮಲ-ಬದ್ಧತೆ, ತಲೆನೋವು, ಜ್ವರ ಉತ್ಪನ್ನವಾಗುವದು. ರಾತ್ರಿ ನಿದ್ದೆಗೆಟ್ಟು ನಾಟಕ, ಸಿನೇಮಾ, ಮದುವೆ, ನಿಬ್ಬಣ, ಜಾತ್ರೆ, ವಗೈರೆ ಮಾಡಬಾರದು. ಒಂದು ವೇಳೆ ಮಾಡಿದರೂ ಮರುದಿವಸ ಆ ನಿದ್ದೆಯನ್ನು ಮಾಡಿ ದಣಿವು ತುಂಬಿಕೊಳ್ಳಬೇಕು.

## ಕುದಿಯಬೇಡ ( ಕದಿಯಬೇಡ )

**ಮಗಳೇ,**

ಅತ್ತೆ ಮಾವ ಗಂಡನನ್ನು ವಂಚಿಸಿ ಕಳವು ಮಾಡಬೇಡ. ಅವರಿಗೆ ಅರಿಯದಂತೆ ಕದ್ದು ಮಾರಬೇಡ. ಹಾಲು, ಮೊಸರು, ಬೆಣ್ಣೆ, ಕಟ್ಟಿಗೆ, ಕುಳ್ಳು, ಕಾಳು ಮೊದಲಾದವುಗಳನ್ನು ಮಾರಿ ಕೆಲವು ಹೆಣ್ಣು

ಮಕ್ಕಳು ಕಳ್ಳ ಗಂಟು ಮಾಡಿಕೊಂಡು ತವರ ಮನೆಯವರು ಕೊಟ್ಟ ರೆಂದು ಹೇಳಿ ಅವರ ಹೆಸರಿನಿಂದ ವಸ್ತ್ರ-ಒಡವೆ ಮಾಡಿಸಿಕೊಳ್ಳು ತ್ತಾರೆ. ಅವು ನಿನಗೆ ತರವಲ್ಲ. ಬಹಳ ಎಚ್ಚರದಿಂದ ಇರು. ಕೆಲವು ಹೆಣ್ಣು ಮಕ್ಕಳು ವಸ್ತ್ರ-ಒಡವೆ ರೊಕ್ಕ ರೂಪಾಯಿ ಕದಿಯುವರು. ಈ ಚಾಳಿ ಹೆಣ್ಣಿಗೆ ತರವಲ್ಲ. ಮಡದಿ ಕಳವು ಮಾಡುವಳೆಂದು ಗಂಡ ನಿಗೆ ಗೊತ್ತಾದರೆ ಗಂಡನು ನಿನ್ನನ್ನು ಕಡೆತನಕ ನಂಬುವದಿಲ್ಲ.

## ಸುಳ್ಳು ಹೇಳಬೇಡ

**ಮೋಹಿನಿ,**

ಪ್ರಾಣ ಹೋದರೂ ಸುಳ್ಳು ಹೇಳಬೇಡ, ಯಾವಾಗಲೂ ಸತ್ಯ ಮಾತಾಡು. ನಿನ್ನ ಮಾತಿನಲ್ಲಿ ಗಂಡನಿಗೆ ಎಷ್ಟೂ ಸಂಶಯ ಬಂದಿರ ಬಾರದು. ಸುಳ್ಳು ಸೂಳಿಗೆ ತರವು. ಉತ್ತಮ ಸ್ತ್ರೀಯರು ಸುಳ್ಳು ಹೇಳುವದಿಲ್ಲ. ಸುಳ್ಳಿನ ಪ್ರಸಂಗವೆಂದರೆ, ಸುಳ್ಳು ಹೇಳಿ ಒಬ್ಬರ ಪ್ರಾಣ ಉಳಿಸು. ನಿನ್ನ ಸುಳ್ಳು ಯಾರಿಗೂ ಅಹಿತ ಮಾಡಿರಬಾರದು.

## ದಯಾದಾನ ಮಾಡು

**ವಿಚಾರವಂತಳೇ,**

ಕೇಳಿಲ್ಲಿ ಬರುವಾಗ ತರಲಿಲ್ಲ, ಹೋಗುವಾಗ ಒಯ್ಯಲಿಲ್ಲ, ಎಲ್ಲ ವನ್ನೂ ಇಲ್ಲಿಯೇ ಬಿಟ್ಟು ಹೋಗುವಿ. ಕಾರಣ ಪುಣ್ಯವಿದ್ದಾಗ, ಭಕ್ತಿ ನೆನವಿದ್ದಾಗ ಸೇವೆ ಮಾಡಿ ಮುಕ್ತಿ ಪಡಿ. ಕೊಟ್ಟದ್ದು ತನಗೆ ಬಚ್ಚಿ ಟ್ಟದ್ದು ಪರರಿಗೆ, ಈ ಮಾತು ಮರೆಯಬೇಡ. ಕುರುಡರು, ಕುಂಟರು, ಬಡವರು, ಅನಾಥರು ಮೊದಲಾದವರಿಗೆ ಅನ್ನ ಅರಿವೆ ಸಹಾಯ ಮಾಡು. ವಿದ್ಯಾರ್ಥಿಗಳಿಗೆ ಆಶ್ರಯ ಕೊಡು. ಶಿಶುಗಳಿಗೆ ಹಾಲನ್ನು ದಾನ ಮಾಡು.

**ಪದ್ಯ:—** ೧ ದಾನಂ ದುರ್ಗತಿ ನಾಶಾಯ
೨ ಶೀಲಂ ಸದ್ಗತಿ ಕಾರಣಂ
೩ ತಪ: ಕರ್ಮ ವಿನಾಶನಾಯ ಭಾವನಾ ಭಾವನಾಶನಾ

ಮೇಲಿನ ಶ್ಲೋಕದ ಅರ್ಥವನ್ನು ತಿಳಿದುಕೊಂಡು ದಾನವನ್ನು ಮಾಡು. ಶೀಲವನ್ನು ಪಾಲಿಸು. ಹೆಚ್ಚು ಹೇಳುವದೇನು ? ಮಗಳೇ ನೀನು ಕಲಿಯುವ ಮಾತು ಬಹಳ ಇರುತ್ತದೆ. ಅವೆಲ್ಲವನ್ನೂ ಕಲಿತು ಕೊಳ್ಳು. ಸ್ತ್ರೀ ಪರ್ಯಾಯವು ಪರಾಧೀನವಾಗಿದೆ. ಹ್ಯಾಗಂದರೆ ಬಾಲಕಿಯರಿದ್ದಾಗ ತಾಯಿ-ತಂದೆಗಳ ಆಧೀನದಲ್ಲಿ, ಪ್ರಾಯದಲ್ಲಿ ಗಂಡನ ಆಧೀನದಲ್ಲಿ, ಮುಪ್ಪಿನ ಕಾಲದಲ್ಲಿ ಮಕ್ಕಳ ಆಧೀನದಲ್ಲಿ ಇರ- ಬೇಕಾಗುತ್ತದೆ. ಈ ಪ್ರಕಾರ ಪರಾಧೀನವಾದ ಸ್ತ್ರೀ ಪರ್ಯಾಯ ದಲ್ಲಿದ್ದು ಪುಣ್ಯ ಕಾರ್ಯ ಮಾಡಿ ಪೂಜಾ, ಅರ್ಚಾದಾನ ವಗ್ಯೆರೆ ಮಾಡಿ, ಸ್ತ್ರೀ ಪರ್ಯಾಯ ಛೇದನ ಮಾಡಬೇಕು. ಸೀತಾ, ದ್ರೌಪದಿ ಮುಂತಾದವರು ಹೇಗೆ ತಮ್ಮ ಆತ್ಮ ಕಲ್ಯಾಣ ಮಾಡಿಕೊಂಡರೋ ಆದರಂತೆ ನೀನಾದರೂ ಪ್ರಯತ್ನದಿಂದ ಪುರುಷಾರ್ಥ ಪಡಿ. ಮಾಡಿ ಮುಂದಿನ ಉತ್ತಮ ಗತಿ ಪಡೆ. ಬಹಳ ಹೇಳುವದೇನು ಎಲ್ಲವೂ ನಿನ್ನ ಕೈಯಲ್ಲಿಯೇ ಇರುವದು.

## ಕೆಟ್ಟ ನಡತೆ ಬಿಟ್ಟು ಬಿಡು

**ಸುಗುಣೀ,**

ನಡೆಯುವಾಗ ಕಾಲು ಸವರಬೇಡ, ಕಾಲು ಧಕ, ಧಕ ಹಾಕ ಬೇಡ, ಸೌಜನ್ಯದಿಂದ ನಡೆ, ಮಂದಗಮನೆ ಎಂದೆನಿಸು. ಜೋಲು ಮೋರೆ ಹಾಕಬೇಡ. ಕುಲು, ಕುಲು ನಗುತ್ತ ಬರು. ಮೂಲೆ ಹಿಡಿದು ಮಲಗಬೇಡ, ಹಿರಿಯರಿಗೆ ಕಾಲು ತಾಗಿಸಬೇಡ, ತಾಕಿದರೆ ಲಗು ನಮಸ್ಕಾರ ಮಾಡು. ಬೀದಿ ಜಗಳಕ್ಕೆ ಹೋಗಬೇಡ. ಕತ್ತಲೆಯಲ್ಲಿ ಒಬ್ಬಳೇ ಹೋಗಬೇಡ. ಗುರು ಹಿರಿಯರು ಕೂತಾಗ ಮೈ ತುಂಬ ಶೆರಗು ಹೊದ್ದುಕೊಂಡು ಅತ್ತಿತ್ತ ನೋಡದೆ ನೆಲ ನೋಡುತ್ತ ನಡೆ. ಗಂಡಸರಿದ್ದ ಮನೆಗೆ ಜೋಡಿಲ್ಲದೆ ಹೋಗಬೇಡ. ಒಬ್ಬರ ಮನೆಯಲ್ಲಿ ಬಿಡಾರ ( ವಸ್ತಿ ) ಮಾಡಿದಾಗ ಒಬ್ಬಳೇ ಮಲಗಬೇಡ. ಗೆಳತಿಯ

ಮನೆಗೆ ಹೋದರೆ ಆ ಮನೆಯ ಗಂಡಸರ ಸಲಿಗೆ ಬೇಡ. ಕೆಟ್ಟ ನುಡಿಗಳನ್ನು ಆಡಬೇಡ. ದುಷ್ಟಿ ಎನಿಸಿಕೊಳ್ಳಬೇಡ. ಗಂಡಸರಿದ್ದಾಗ ಗಟ್ಟಿಯಾಗಿ ನಗಬೇಡ. ಒಬ್ಬರಿಗೂ ಖೊಟ್ಟಿಯಾಗಬೇಡ. ಸಿಟ್ಟು ಬಂದಾಗ ಸಾಮಾನು ಥಪ್ ಥಪ್ ಇಡಬೇಡ. ಸಿಟ್ಟಿನ ಮೋರೆ ಹೆಣ್ಣಿಗೆ ತರವಲ್ಲ. ಹೆಣ್ಣು ಭೂದೇವಿಯಂತೆ ಇರಬೇಕು. ಕ್ಷಮಾ ಗುಣವನ್ನು ಧಾರಣ ಮಾಡಬೇಕು. ಕ್ಷಮಾ ಗುಣವು ನಿನ್ನನ್ನು ಈ ಸಂಸಾರದಿಂದ ಪಾರು ಮಾಡುವ ಹಡಗವೆಂದು ತಿಳಿ.

## ಮೂಢತನವನ್ನು ಬಿಡು

## ಸಮ್ಯಕ್ತ್ವವನ್ನು ಧಾರಣ ಮಾಡು

**ಮಂದಗಮುನಿಯೇ,**

ತಂಗೀ ನೀನು ಮೈ ಮೇಲೆ ಹಂಚಿ ಬಟ್ಟು ಚುಚ್ಚಿಕೊಳ್ಳಬೇಡ. ಆ ಕಪ್ಪು ತೆಗೆಯಲಿಕ್ಕೆ ಬರುವದಿಲ್ಲ. ಆದ್ದರಿಂದ ನಿನ್ನ ಶರೀರವು ಅಂದಗೆಡುತ್ತದೆ. ಹಲ್ಲಿಟ್ಟು ಹಚ್ಚಿ ಹಲ್ಲುಗಳನ್ನು ಕರ್‍ರಗೆ ಮಾಡಿಕೊಳ್ಳಬೇಡ, ತ್ರಿ ಮೂಢವನ್ನು ಬಿಟ್ಟು ಬಿಡು. ಈ ಮೂರು ಮೂಢ ಯಾವವೆಂದರೆ, ದೇವಮೂಢ, ಪಾಖಂಡಿಮೂಢ, ಲೋಕಮೂಢ ಇವುಗಳನ್ನು ಬಿಟ್ಟು ಬಿಡು. ೧ ನೆಯ ಮೂಢ:— ಎಲ್ಲವ್ವ, ಕರೆವ್ವ, ಕಾಳವ್ವ, ದುರಗವ್ವ, ದ್ಯಾಮವ್ವ, ಹನುಮಪ್ಪ ಮುಂತಾದವನ್ನು, ಅನೇಕ ಶಸ್ತ್ರಧಾರಿ ವಿಕಾರ ಶರೀರಿಕ ಧಾರಕರಾದವರಲ್ಲಿ ದೇವರೆಂದು ಭಾವನಾ ಮಾಡಿಕೊಂಡು ಬೇಡಿಕೊಳ್ಳುವದು, ಹರಿಕೆ ಹೊರುವದು. ನಮಗೆ ಮಕ್ಕಳಾದರೆ ಅಥವಾ ಸಂಪತ್ತು ಪ್ರಾಪ್ತವಾದರೆ ನಿಮಗೆ ಛತ್ರ ಇಡಿಸುವೆನು, ಇಷ್ಟು ರೂಪಾಯಿ ಮುಡುಪು ಕೊಡುತ್ತೇನೆ ಎಂದು ಬೇಡಿಕೊಳ್ಳುವದು ದೇವ ಮೂಢತಾ ಅನ್ನುತ್ತಾರೆ. ದೇವರು ಕೊಡುವದೆಲ್ಲಾ ಅನ್ನುವ ಮಾತು ಬಿಡಬೇಕು. ತಮ್ಮ ತಮ್ಮ ಕರ್ಮಾನುಸಾರ ಇದ್ದಂತೆ ಆಗುತ್ತದೆ. ಕಾರಣ ದೇವ ಮೂಢತೆಯನ್ನು ಬಿಡಬೇಕು. ಇನ್ನು ಲೋಕ

ಮೂಢತಾ ಸತ್ತವರ ಎಲುಬುಗಳನ್ನು ಗಂಗಾಭಾಗೀರಥಿಗೆ ಮುಟ್ಟಿಸು ವದರಿಂದ ಸತ್ತ ಜೀವಿಗೆ ಸದ್ಗತಿ ಆಗುತ್ತದೆ ಎಂದು ತಿಳಿಯುವದು, ಗಂಗಾ, ಯಮುನೆಗಳ ನೀರು ಪವಿತ್ರವೆಂದು ತಿಳಿಯುವದು, ಸಂಕ್ರಾಂತಿ ವ್ಯಾತಿಪಾತಗಳಲ್ಲಿ ಸ್ನಾನ ಮಾಡುವದು, ದೇವರಿಂದಲೇ ಒಳಿತು ಹೀನ ಕೆಲಸಗಳು ಆಗುತ್ತವೆ, ಎಂದು ತಿಳಿಯುವದು, ಇದೆಲ್ಲಾ ಲೋಕ ಮೂಢತಾ ಆಗುವದು. ಆದ್ದರಿಂದ ಇವುಗಳನ್ನು ಸರ್ವಥಾ ನಂಬ ಬೇಡ. ಮತ್ತು ಪಾಖಂಡಿ ಮೂಢತಾ ಅಂದರೆ, ಪಾಖಂಡಿ, ದುರಾ ಚಾರಿ, ಪರಿಗ್ರಹ, ವಿಷಯಾಸಕ್ತ, ಇಂಥವರಲ್ಲಿ ಯಂತ್ರ ಮಂತ್ರ ಮಾಡಿಸಿಕೊಳ್ಳುವದು. ಇವರು ಮಾತಾಡಿದ ಮಾತು ನಿಜವೆಂದು ನಂಬಿ ಭಕ್ತಿ ಇಡುವದೇ ಪಾಖಂಡಿ ಮೂಢತಾ ಅನ್ನುತ್ತಾರೆ. ಕಾರಣ ಈ ಮೂಢತೆಯನ್ನು ಬಿಟ್ಟು ಸಮ್ಯಗ್ದರ್ಶನ ಮಾಡಿಕೊಳ್ಳಿರಿ. ಸಮ್ಯಗ್ದ-ರ್ಶನದಿಂದ ಸುಖವನ್ನು ಪಡಿ. ಸಮ್ಯಗ್ದರ್ಶನವೆಂದರೆ ಸತ್ಯ ದೇವ, ಸತ್ಯ ಶಾಸ್ತ್ರ, ಸತ್ಯ ಗುರು ಇವರಲ್ಲಿ ಭಕ್ತಿ ಇಡುವದೇ ಸಮ್ಯಗ್ದರ್ಶನ ವೆಂದು ಹೇಳುವರು. ಸತ್ಯ ದೇವರೆಂದರೆ ಅವರು ಕ್ಷುದಾ ತೃಷಾ ಹದಿನೆಂಟು ದೋಷ ರಹಿತವಾದ ದೇವರಿಗೆ ದೇವರೆಂದು ಅನ್ನಬೇಕು. ಯಾವ ಜಾತಿಗೂ ವಿರೋಧವಿಲ್ಲದೆ ಎಲ್ಲಾ ಜೀವಿಗಳಿಗೆ ಸಂಸಾರ ಸಮುದ್ರದೊಳಗಿಂದ ಪಾರಾಗುವ ಉಪಾಯವನ್ನು ಯಾವ ಶಾಸ್ತ್ರ ದಲ್ಲಿ ಹೇಳಿದೆಯೋ ಅಂಥಾ ಶಾಸ್ತ್ರವು ಕೇಳಲಿಕ್ಕೆ, ಹೇಳಲಿಕ್ಕೆ, ಭಕ್ತಿ ಇಡಲಿಕ್ಕೆ ಮತ್ತು ನಮುಸ್ಕಾರಕ್ಕೆ ಯೋಗ್ಯವೆಂದು ತಿಳಿ. ಸತ್ಯ ಗುರು ಯಾರೆಂದರೆ ಪರಮ ದಿಗಂಬರ ಗುರುಗಳು, ಯಾರು ಪರಿಗ್ರಹ ರಹಿತ ಇರುತ್ತಾರೆ. ವಿಷಯ ಪ್ರಪಂಚದಿಂದ ವಿರಕ್ತ ಇರುತ್ತಾರೆ. ಅಂದರೆ ಪಂಚೇಂದ್ರಿಯಗಳನ್ನು ಗೆದ್ದಿರುತ್ತಾರೆ. ಅವರ ಮೇಲೆ ಶ್ರದ್ಧೆ ಇಡು ವದು, ಅವರಿಗೆ ನಮುಸ್ಕಾರ ಮಾಡುವದು, ಅಂದರೆ ದೇವ-ಶಾಸ್ತ್ರ, ಗುರುಗಳ ಮೇಲೆ ಶ್ರದ್ಧೆ ಇಡುವದೇ ಸಮ್ಯಕ್ತ್ವವು.

ಈ ಲೋಕದಲ್ಲಿ ಪುಣ್ಯಶಾಲಿಗಳಾದ ಮಹಾ ಭಾಗ್ಯವಂತರ ಲ್ಲಿಯೂ ಭವ ಪರಭವಗಳ ಸುಧಾರಣೆಯಾಗುವದರಲ್ಲಿಯೂ ಕ್ಷಮಾ ಗುಣವು ಪ್ರಕಟವಾಗುತ್ತದೆ. ಇನ್ನು ಸಿಟ್ಟನ್ನು ಗೆಲ್ಲುವ ಬಗೆ ಹ್ಯಾಗಂದರೆ ಯಾರಾದರು ದುರ್ವಚನಗಳಿಂದ ದುಃಖಗೊಳಿಸಿದರೆ ಅಥವಾ ಬೈದರೆ, ತುಡುಗಿ, ಕಳ್ಳಿ, ಅನ್ಯಾಯು, ದುರಾಚಾರಿ, ದುಷ್ಟಿ, ಚಾಡಿಕೋರಿ ಅನೇಕ ರೀತಿಯಿಂದ ಹಳಿದರೆ ಶೀಘ್ರ ಕೋಪಿಗಳಾಗದೆ ನಾವು ವಿಚಾರ ಮಾಡುವದೇನಂದರೆ ನಾವು ಅವರಿಗೇನು ಅಪರಾಧ ಮಾಡಿದೆವೋ ಎಂಬುದನ್ನು ವಿಚಾರ ಮಾಡಿ ನೋಡಿಕೊಂಡು ನಾವು ರಾಗ, ದ್ವೇಷಗಳಿಗೆ ವಶವಾಗಿ ಅಪರಾಧ ಮಾಡಿದ್ದಾದರೆ ಅವರು ಬೈಯುವದು ಯೋಗ್ಯ ಅದೆ ಎಂದು ಸುಮ್ಮನಿರಬೇಕು. ಮತ್ತು ಪಶ್ಚಾತ್ತಾಪ ಪಡಬೇಕು. ನಾವು ನಿರಪರಾಧಿ ಇರುವ ಪಕ್ಷದಲ್ಲಿ ವ್ಯಸನಪಡುವ ಕಾರಣವಿಲ್ಲ. ನನ್ನ ಪೂರ್ವ ಜನ್ಮದ ಕರ್ಮ ನಾಶ ವಾಗುತ್ತದೆಂದು ಕ್ಷಮಾ ಗುಣ ಧಾರಣ ಮಾಡಬೇಕು. ತಂಗೀ ಬಹಳ ಹೇಳುವದೇನು, ಯಾವತ್ತು ಗುಣಗಳಲ್ಲಿ ಕ್ಷಮಾ ಗುಣವು ಶ್ರೇಷ್ಠ ವಾದದ್ದೆಂದು ತಿಳಿದು ನಡಿದುಕೊಳ್ಳಬೇಕು. ಈ ಕ್ಷಮಾ ಗುಣವು ನಿನ್ನನ್ನು ಉತ್ತಮ ಗತಿಗೆ ಒಯ್ಯುವದು. ಇದೊಂದು ಸಾಧನವೆಂದು ಈ ಗುಣ ವನ್ನು ಧಾರಣ ಮಾಡು. ಇದೇ ಉತ್ತಮ. ಕ್ಷಮಾ ಗುಣವು ಈ ಗುಣಕ್ಕೆ ಜ್ಞಾನಿಗಳು ಚಿಂತಾಮಣಿ ಎಂದು ಭಾವಿಸುತ್ತಾರೆ. ಇದನ್ನು ಮುಂದೆ ಶ್ಲೋಕ ರೂಪದಲ್ಲಿ ತಿಳಿಸುತ್ತೇನೆ.

## ಶ್ರೀಮಂತಳೆಂಬ ಹೆಮ್ಮೆ ಬೇಡ

**ಪ್ರಿಯಮತೀ,**

ಶ್ರೀಮಂತ ಗಂಡನನ್ನು ಕೈ ಹಿಡಿದಾಗ ದೇವರನ್ನು ಸ್ಮರಿಸು. ಸೊಕ್ಕಿನಿಂದ ನಡೆಯಬೇಡ. ನಾನೇ ಹೆಚ್ಚು ನನ್ನ ಸಮಾನ ಯಾರಿಲ್ಲ ವೆನ್ನಬೇಡ. ಶ್ರೀಮಂತಿಕೆಯು ಯಾರಿಗೂ ಸ್ಥಿರವಲ್ಲ. ಇಂದ್ರ, ಅಹ ಮೇಂದ್ರ, ಬಲಭದ್ರ ನಾರಾಯಣ ಮೊದಲಾದವರ ಐಶ್ವರ್ಯವು ಸಹ

ಕ್ಷಣದಲ್ಲಿ ನಷ್ಟವಾಗಿ ಹೋದವು. ಅಂದ ಮೇಲೆ ನಮ್ಮಂಥವರ ಐಶ್ವರ್ಯದ ಪಾಡೇನು. ಐಶ್ವರ್ಯ ಬಂದಾಗ ಬಡವರು ಕಣ್ಣಲ್ಲಿ ಕಾಣುವದಿಲ್ಲ. ಆದ್ದರಿಂದ ಚನ್ನಾಗಿ ನಿನಗೆ ಅರಿವು ಇರಲಿ.

**ಪದ್ಯ** || ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು ||

ಎಂಬ ನಾಣ್ನುಡಿಯಂತೆ ನೀನು ಬಡವರ ಮೇಲೆ ಪ್ರೇಮ ದಯಾ-ದಾಕ್ಷಿಣ್ಯಗಳಿಂದ ನಡಿದುಕೋ. ಬಡವರು ನಿನ್ನಲ್ಲಿ ಸುಖ-ದುಃಖಗಳನ್ನು ಹೇಳಲಿಕ್ಕೆ ಬಂದರೆ ಅವರ ಸಂಗತಿ ಲಕ್ಷ್ಯಪೂರ್ವಕ ಕೇಳಿ ಅವರಿಗೆ ಕೈಲಾದಮಟ್ಟಿಗೆ ಸಹಾಯ ಮಾಡು. ಒಟ್ಟಿಗೆ ಎಲ್ಲರಿಗೂ ನೀನು ಹಡೆದ ತಾಯಿಯಾಗು. ಶ್ರೀಮಂತಿಕೆಯು ಎಂದಾದರೂ ವಂಚಿಸ ತಕ್ಕದ್ದು ಎಂದು ತಿಳಿದು ಬಡವರ ಮೇಲೆ ದಯವನ್ನು ತೋರಿಸು. ಶ್ರೀಮಂತರು ಐಶ್ವರ್ಯವನ್ನು ತಾವೊಬ್ಬರೆ ಭೋಗಿಸತಕ್ಕವರೆಂದು ತಿಳಿಯುತ್ತಾರೆ. ಆದರೆ ಅದು ತಪ್ಪು. ಯಾಕಂದರೆ ಶ್ರೀಮಂತರ ದುಡ್ಡಿನ ಉಪಯೋಗವು ಲೋಕದಲ್ಲಿ ಬಡವರ ಮೇಲೆ ಉಪಕಾರಕ್ಕಾಗಿಯೇ ಎಂದು ತಿಳಿಯಬೇಕು. ಇಲ್ಲದೆ ಕೇವಲ ತಮ್ಮ ಹಿತಕ್ಕೆ ಉಪಯೋಗ ಮಾಡಿಕೊಂಡರೆ ಲೋಕದಲ್ಲಿ ಅವರಿಂದ ಏನೂ ಉಪಯೋಗವಿಲ್ಲ. ಅವರಲ್ಲಿ ಇರುವ ದುಡ್ಡು ಸರ್ಪಿನ ಹೆಡೆಯಲ್ಲಿ ರತ್ನವಿದ್ದಂತೆ, ಅದು ಎಷ್ಟು ಕಿಮ್ಮತ್ತಿನದಿದ್ದರೂ ಅದರಿಂದ ಜನರಿಗೆ ಏನೂ ಉಪಯೋಗವಿಲ್ಲ. ಆದ್ದರಿಂದ ದುಃಖಿತರಾದ ಬಡವರ ಮೇಲೆ ಉಪಯೋಗ ಮಾಡಿ ನೀವು ಮನುಷ್ಯ ಜನ್ಮವನ್ನು ಸಫಲ ಮಾಡಿಕೊಳ್ಳಬೇಕು. ಈ ಮಾತನ್ನು ಮರೆಯದೆ ನೆನಪಿನಲ್ಲಿ ಇಟ್ಟುಕೊಳ್ಳು.

## ನೀನು ಭೂದೇವಿಯಾಗು

**ಭೂದೇವೀ,**

**ಪದ್ಯಃ**— ಸೈರಣೆ ಎಂಬುದು ವೈಸಿರಿ | ಸೈರಣೆಯೇ ದಾನ ಧರ್ಮ ಜಪವಂ, ತಪವಂ, | ಸೈರಣೆ ಪುಣ್ಯದ ಮೂಲಂ | ಸೈರಣೆ ಸರ್ವರಿಗೆ ಹಿತವು ವಾಣಿಯ ಮುಖರಾ ||

ನೀನು ಯಾವಾಗಲೂ ಭೂದೇವಿಯಂತೆ ದೊಡ್ಡ ಮನಸ್ಸಿನವಳೂ ಶಾಂತ ಚಿತ್ತಳೂ, ಸಮಾಧಾನಿಯೂ ಆಗಿರು, ದೊಡ್ಡ ದೊಡ್ಡ ಮಹನೀಯರ ಚರಿತ್ರೆಗಳನ್ನು ಓದಿ ಅವರು ನಡೆದಿರುವಂತೆ ನಡೆಯಲು ಕಲಿ. ಒಳ್ಳೆಯ ಸ್ತ್ರೀಯರೊಡನಾಡಿ ಅವರ ದೊಡ್ಡ ಗುಣಗಳನ್ನು ಕಲಿ. ಚಿಲ್ಲರ ಹೆಂಗಸರ ಬುದ್ಧಿಯನ್ನು ಕಲಿಯಬೇಡ. ಸಣ್ಣ ಬುದ್ಧಿಯ ಹೆಣ್ಣು ಮಕ್ಕಳ ಸ್ನೇಹವನ್ನು ಸರ್ವಥಾ ಮಾಡಬೇಡ. ಅಂಥವರಿಂದ ಏನಾದರೂ ಸಣ್ಣ ಪುಟ್ಟ ಮಾತುಗಳು ಬಂದರೆ ಸಹಿಸು, ಬೈದವರನ್ನು ಬಂಧುಗಳೆನ್ನು; ನಿಂದಿಸಿದವರನ್ನು ತಂದೆ ತಾಯಿಗಳೆನ್ನು; ಕೊಂಡಾಡಿದವರೆನ್ನ ಶೂಲದಲ್ಲಿಕ್ಕುವರೆಂದು ಎಂಬಂದಾಗಿ. ಈ ಮಾತು ಬರೆಯ ಮಾತಿನಿಂದ ಬರಲಾರದು. ಇದನ್ನು ದಿನವೂ ಅಭ್ಯಾಸ ಮಾಡಿ ಕಲಿಯಬೇಕು. ಕುಟುಂಬದಲ್ಲಿ ಬಹಳ ಮಂದಿಯೊಡನೆ ಇದ್ದಾಗ ಮತ್ತು ಹೊರಗಿನ ಜನರ ಸಂಗತಿ ಮಾಡುವಾಗ ತಾಕಲಾಟ ಬರುವದು. ಆಗ ಬಹು ತಾಳ್ಮೆಯಿಂದ ತಾಳಿಕೊಳ್ಳು. ಮಕ್ಕಳ ದೆಸೆಯಿಂದ ನಿನ್ನ ಜನ್ಮ ಹಣ್ಣಾಗುವದು. ಮಕ್ಕಳು ಬಹಳ ಕಾಡಿದರೆ ಅದನ್ನು ಶಾಂತ ರೀತಿಯಿಂದ ತಾಳಿಕೋ. ಬೀಗರಲ್ಲಿ ಜಗಳ ಬರದಂತೆ ನೋಡಿಕೊಳ್ಳು. ಬಂದರೂ ತಾಳಿಕೊಳ್ಳು. ಜಗಳ ಬಂದರೆ ಹಿಂದಕ್ಕೆಸರಿ. ಹಿರಿಯತನಕ್ಕೆ ಮುಂದೆ ಹೋಗಬೇಡ. ಕಿರಿದಾಗಿ ನಡೆದರೆ ಕುಂದೇ ಇಲ್ಲ.

ಸಿಟ್ಟು ಬಹಳ ಕೆಟ್ಟ. ಸಿಟ್ಟು ಬಂದರೆ, ಶರೀರಕ್ಕೆ ಬೆಂಕಿ ಹತ್ತಿದ ಹಾಗೆ. ಆಗುತ್ತದೆ. ಸಿಟ್ಟಿನಿಂದ ರಕ್ತ ಸುಡುವದು, ಸಿಟ್ಟು ಏರಿದಷ್ಟು ಇಳಿಸುವದು ಕಷ್ಟ, ಮೊದಲೇ ಏರಗೊಡಬೇಡ, ಸಿಟ್ಟನ್ನು ತಾಳಿಕೊಳ್ಳುವದು ಮತ್ತು ಸುಮ್ಮನಿರುವದೇ ಔಷಧವು.

ಪುಷ್ಪಕೋಟಿಸಮಂ ಸ್ತೋತ್ರಕೋಟಿಸಮಂ ಜಪಃ ।
ಜಪಕೋಟಿಸಮಂ ಧ್ಯಾನಂ ಧ್ಯಾನ ಕೋಟಿಸಮಂ ಕ್ಷಮಾ ॥

**ಭಾವಾರ್ಥ:**— ಒಂದು ಕೋಟಿ ಪುಷ್ಪಗಳನ್ನರ್ಚಿಸುವದ ರಿಂದುಂಟಾಗುವಷ್ಟು ಪುಣ್ಯ - ಫಲವು ದೇವರ ಒಂದು ಸ್ತೋತ್ರ ದಿಂದುಂಟಾಗುವದು. ಒಂದು ಕೋಟಿ ಸ್ತೋತ್ರಗಳಿಂದುಂಟಾಗು ವಷ್ಟು ಫಲವು ಸ್ಪಷ್ಟವಾಗಿ ಭಗವನ್ನಾಮೋಚ್ಚಾರವನ್ನು-ಜಪವನ್ನು ಮಾಡುವುದರಿಂದುಂಟಾಗುವದು, ಒಂದು ಕೋಟಿ ಜಪಗಳಿಂದುಂಟಾ ಗುವಷ್ಟು ಫಲವು ಒಂದು ಧ್ಯಾನದಿಂದುಂಟಾಗುವದು. ಒಂದು ಕೋಟಿ ಧ್ಯಾನಗಳಿಂದಾಗುವಷ್ಟು ಫಲವು ಒಂದು ಕ್ಷಮೆಯಿಂದುಂಟಾಗುವದು. ಕ್ಷಮೆಯು ಇಲ್ಲದಿದ್ದರೆ ಕೋಟಿ ಪುಷ್ಪಾರ್ಚನೆ ಮೊದಲಾದವುಗಳಿಂದ ಉಪಾರ್ಜಿಸಿದ ಪುಣ್ಯದ ರಾಶಿಯನ್ನು ಕ್ರೋಧವು ನಾಶ ಮಾಡುವು ದೆಂದೂ ಅದಕ್ಕೆ ವಿರೋಧಿಯಾದ ಕ್ಷಮೆಯಿದ್ದರೆ ಆ ಪುಣ್ಯ ರಾಶಿಯು ನಿರುಪಾಯವಾಗಿರುವುದೆಂದೂ ಆದುದರಿಂದ ಅವೆಲ್ಲಕ್ಕಿಂತಲೂ ಕ್ಷಮೆಯು ಶ್ರೇಷ್ಠವೆಂದೂ ಮುಖ್ಯಾಭಿಪ್ರಾಯವಾಗಿರುವುದು.

ನರಸ್ಯಾಭರಣಂ ರೂಪಂ ರೂಪಸ್ಯಾಭರಣಂ ಗುಣಃ
ಗುಣಸ್ಯಾಭರಣಂ ಜ್ಞಾನಂ ಜ್ಞಾನಸ್ಯಾಭರಣಂ ಕ್ಷಮಾ ||

**ಭಾವಾರ್ಥ:**— ಮನುಷ್ಯನಿಗೆ ರೂಪ-ಸೌಂದರ್ಯವು ಆಭ ರಣ-ಭೂಷಣ. ರೂಪಕ್ಕೆ ಗುಣವು ಭೂಷಣ. ಗುಣಕ್ಕೆ ಜ್ಞಾನವು ಭೂಷಣ. ಜ್ಞಾನಕ್ಕೆ ಕ್ಷಮೆಯು ಭೂಷಣ.

## ಅತಿಥಿ ಸತ್ಕಾರ ಮಾಡು

**ಎನ್ನ ಮಣಿಯೇ,**

ಮನೆಗೆ ಬಂದವರನ್ನು ಬನ್ನಿರಿ ಎನ್ನು, ಪ್ರೀತಿಯಿಂದ ಹಾಸಿ ಕುಳ್ಳಿರಿಸಿ ಅವರ ಸುಖ ದುಃಖಗಳನ್ನು ವಿಚಾರಿಸು. ಫರಾಳದ ತಾಂಬೂಲವನ್ನು, ಕುಂಕುಮವನ್ನು ಕೊಡು. ಬೀಗರು ಬಂದರೆ ಕಾಲಿಗೆ ನೀರು ಕೊಟ್ಟು ಊಟ ಮಾಡಿರೆನ್ನು, ಊಟ ಮಾಡಿಸು. ಯೋಗ ಕ್ಷೇಮ ಕೇಳು. ಮುಖ ಗಂಟು ಹಾಕಬೇಡ, ಏಕೆ ಬಂದರೋ

ಏನೋ ಎಂದು ಬೇಸರಗೊಳ್ಳಬೇಡ. ಕಠೋರವಾದ ಮಾತುಗಳನ್ನು ಆಡಬೇಡ. ಅಕ್ಕರೆಯ ಮಾತುಗಳನ್ನಾಡು. ಅಂದರೆ ನೀನು ಅವರಲ್ಲಿಗೆ ಹೋದಾಗ ಅವರು ನಿನ್ನನ್ನು ಪ್ರೀತಿಸುವರು. ಬನ್ನಿರಿ ಎಂದರೆ ನಿಮ್ಮ ಮನೆಯ ಗೌರವ ಹಾರಿ ಹೋಗುವದೇ ? ಕುಳ್ಳಿರಿ ಎಂದರೆ ನಿಮ್ಮ ನೆಲ ಉರುಳಿ ಹೋಗುವದೇ, ಉಣ್ಣಿರಿ ಅಂದರೆ ನಿಮ್ಮ ಶಿರ ಹೊಟ್ಟೆ ಒಡೆಯುವದೇ ? ಕೊಡಲಿಲ್ಲದಿದ್ದರೂ ಈ ಮೂರು ಗುಣಗಳು ನಿಮ್ಮ-ಲ್ಲಿಲ್ಲದಿದ್ದರೆ ಎಂದೂ ಸಂಸಾರಿಕರಿಗೆ ಆತಿಥ್ಯ ಮಾಡುವ ಬಗೆಯನ್ನು ಉತ್ತಮ ರೀತಿಯಿಂದ ಸಾಗಿಸಲಾಗದು. ಮನೆಗೆ ಬಂದವರ ಊಟ ಉಪಚಾರಗಳನ್ನು ವಿಚಾರದಿಂದ ಮಾಡು. ಮನೆಗೆ ಬಂದು ಯಾರಾದರು ಕೇಳಿದರೆ ನೀವು ಯಾರು, ಯಾಕೆ ಬಂದಿರಿ, ಏನು ಕೆಲಸ ಇದನ್ನೆಲ್ಲ ವಿಚಾರ ಮಾಡಿ ಬಂದವರಿಗೆ ಉಪಚಾರ ಮಾಡಬೇಕು. ಬಂದರೆ ಬಂದಿದ್ದಾರೆ ಬಿಡು ಎಂದು ಎಂದೂ ಅನ್ನಬೇಡ. ಈ ಗರ್ವವು ನಿನ್ನ ಮನೆಯ ಮರ್ಯಾದೆಯನ್ನು ಕಳೆಯುತ್ತದೆ. ಇದಕ್ಕೆ ಒಂದು ಸಣ್ಣ ಕತೆಯನ್ನು ಹೇಳುತ್ತೇನೆ ಕೇಳು.

ಒಂದು ಪಟ್ಟಣದಲ್ಲಿ ಒಬ್ಬ ಸಾವುಕಾರನ ಮಗನು ಇರುತ್ತಿದ್ದನು. ಅದೇ ಊರಿಂದ ನಾಲ್ಕು ಮೈಲಿನ ಮೇಲೆ ಒಂದು ಸಣ್ಣ ಹಳ್ಳಿಯಲ್ಲಿ ಒಬ್ಬ ಬಡವನ ಮಗನು ಇರುತ್ತಿದ್ದನು. ಹಳ್ಳಿಯ ಬಡವನ ಮಗನು ಶಾಲೆ ಕಲಿಯಲಿಕ್ಕೆ ಅದೇ ಪಟ್ಟಣಕ್ಕೆ ಹೋಗುತ್ತಿದ್ದನು. ಆ ಶಾಲೆಯಲ್ಲಿ ಸಾವುಕಾರನ ಮಗನಿಗೂ ಬಡವನ ಮಗನಿಗೂ ಗೆಳೆತನ ಕೂಡಿತು. ಮುಂದೆ ಶಾಲೆ ಕಲಿತು ದೊಡ್ಡವನಾಗಿ ಬಡಹುಡುಗನು ತನ್ನ ಹಳ್ಳಿಗೆ ಹೋದನು. ಸಾವುಕಾರನ ಮಗನೂ ಶಾಲೆ ಬಿಟ್ಟು ತನ್ನ ಕೆಲಸಕ್ಕೆ ತೊಡಗಿದನು. ಸಾವುಕಾರನ ಮಗನು ಮುಂದೆ ಎಂಟು ಹತ್ತು ವರ್ಷಗಳಲ್ಲಿ ಲಗ್ನವಾಗಿ ಒಂದು ಪ್ರಸಿದ್ಧವಾದ ಮನೆಯನ್ನು ಕಟ್ಟಿಸಿದನು. ಆ ಮನೆಯನ್ನು ನೋಡಲಿಕ್ಕೆ ಬಹು ದೂರದಿಂದ ಜನರು ಬರುತ್ತಿದ್ದರು. ಅದನ್ನು ಕೇಳಿ ಹಿಂದೆ ಶಾಲೆಯಲ್ಲಿ ಗೆಳೆತನವಿದ್ದ ಬಡ

ವನು ನೋಡಬೇಕೆಂದು ಚೈತ್ರ ಮಾಸದಲ್ಲಿ ಹೊರಟನು. ಬಿಸಲಿನಲ್ಲಿ ಕಳವಳಗೊಂಡು ಒಂದು ಘಂಟೆ ಸುಮಾರಕ್ಕೆ ಪಟ್ಟಣಕ್ಕೆ ಮುಟ್ಟಿದನು. ಆ ಮನೆಗೆ ಹೋಗಿ ಸಾವುಕಾರನನ್ನು ಕೇಳಿದನು. ಅವರು ಊರಲ್ಲಿಲ್ಲ ವೆಂದು ಸಾವುಕಾರನ ಹೆಂಡತಿ ಹೇಳಿ ಒಳಗೆ ಹೋದಳು. ಬರಹೋ ಗುವ ಜನರು ಮನೆಯನ್ನು ನೋಡಿ ನೋಡಿ ಹೋಗುವ ಕ್ರಮವು ನಡದೇ ಇತ್ತು. ಇವನನ್ನು ಯಾರು ದಾದ ಮಾಡಲೇಇಲ್ಲ. ಪುನಃ ಬಡವನು ತನ್ನ ಹಳ್ಳಿಯ ದಾರಿಯನ್ನು ಹಿಡಿದನು. ಅಷ್ಟರಲ್ಲಿ ಸಾವು ಕಾರನು ಇದುರಿಗೆ ಬಂದನು. ಅವನಿಗೆ ಹಿಂದಿನ ಗೆಳೆತನದ ಅರಿವು ಆಯಿತು.

ಎಲ್ಲಿ ಹೋಗಿದ್ದಿರಿ ಎಂದು ಸಾವುಕಾರನು ಕೇಳಿದನು. ಆಗ ಬಡ ವನು ನಿಮ್ಮ ಮನೆ ನೋಡಲಿಕ್ಕೆ ಹೋಗಿದ್ದೆನು ಎಂದು ಹೇಳಿದನು. ಆಗ ಮನೆ ಹ್ಯಾಗೆ ಆಗಿದೆ ಎಂದು ಸಾವುಕಾರನು ಕೇಳಿದನು. ಮನೆ ಯಲ್ಲಾ ಚಲೋ ಅದೆ ಪಗಂತು ನಿಮ್ಮ ಮನೆ ನನ್ನ ಮನೆಯ ಒಂದು ಕಂಬದ ಕಿಮ್ಮತ್ತು ಇಲ್ಲ ಅಂದನು. ಅದನ್ನು ಕೇಳಿ ಸಾವುಕಾರನಿಗೆ ಆಶ್ಚರ್ಯ ಆಯಿತು. ಹಾಗಾದರೆ ಇನ್ನು ಹದಿನೈದು ದಿವಸಗಳಲ್ಲಿ ನಿಮ್ಮ ಮನೆ ನೋಡಲಿಕ್ಕೆ ಬರುತ್ತೇವೆ ಎಂದು ಹೇಳಿ ಹೋದನು. ಬಡವನು ತನ್ನ ಊರಿಗೆ ಬಂದನು. ಮುಂದೆ ಅಂದರೆ ವೈಶಾಖ ಮಾಸದಲ್ಲಿ ಸಾವು ಕಾರನು ಕಾಲು ನಡಿಗೆಯಿಂದ ಹಳ್ಳಿಯ ಬಡವನ ಮನೆ ನೋಡಲಿಕ್ಕೆ ಆಳು ಮಕ್ಕಳನ್ನು ಕರೆದುಕೊಂಡು ಬಂದನು. ಮನೆಯಲ್ಲಿ ಬಡವನು ಇದ್ದಿರ ಲಿಲ್ಲ. ಅತ್ತ ಇತ್ತ ನೋಡುತ್ತಾರೆ ಹೊಸ ಮನೆ ಕಾಣಲಿಲ್ಲ. ಆಗ್ಗೆ ಬಡ ವನ ಹೆಂಡತಿ ಒಳಗಿಂದ ಬಂದು ಬರ್ರಿ ಅಣ್ಣಾ ನೀರು ತಕ್ಕೊಳ್ಳಿರಿ. ಹೊರಗೆ ಹೋಗಿರುವರು. ಈಗ ಬರುವರು ಕುಳ್ಳಿರಿ ಎಂದು ಕೈಕಾಲಿಗೆ ನೀರು ಕೊಟ್ಟು ಕೂಡ್ರಲಿಕ್ಕೆ ಹಾಸಿ ಕೊಟ್ಟಳು. ಒಳಗೆ ಎಲ್ಲ ತರದ ಪಕ್ವಾನ್ನ ಅಂದರೆ, ಹೋಳಿಗೆ, ಶೀಕರಣಿ ತಯಾರು ಮಾಡುವಷ್ಟರಲ್ಲಿ ಬಡವನು ಬಂದನು. ಇಬ್ಬರಿಗೂ ಪ್ರೇಮದಿಂದ ಊಟಕ್ಕೆ ಬಡಿಸಿದಳು. ಸಾವು

ಕಾರನಿಗೂ ಆನಂದವಾಯಿತು. ಆ ನಂತರ ಸಾವುಕಾರನು ನಿಮ್ಮ ಮನೆ ಎಲ್ಲಿ ? ನಿಮ್ಮ ಮನಿಯ ಕಂಬದ ಮಹತ್ವ ಹೇಳಿದಿರಿ ಎಂದು ಕೇಳಿದನು. ಆಗ ಬಡವನು ಇದೇ ನನ್ನ ಮನೆಯ ಕಂಬವೆಂದು ತನ್ನ ಹೆಂಡತಿಯನ್ನು ತೋರಿಸಿದನು. ಆಗ ಸಾವುಕಾರನು ಸುಮ್ಮನೆ ನಿಂತನು. ಆಗ ಬಡವನು ಮಿತ್ರನೇ ನಾನು ನಿಮ್ಮ ಮನೆ ನೋಡಲಿಕ್ಕೆ ಬಿಸಲಲ್ಲಿ ಬಂದೆನು. ನಿನ್ನ ಹೆಂಡತಿ, ನೀವು ಯಾರು? ಯಾಕೆ ಬಂದಿರಿ? ನೀರು ತಕ್ಕೊಳ್ಳಿರಿ. ಅನ್ನಲಿಲ್ಲ ಅಂದ ಮೇಲೆ ನಿನ್ನ ಮನೆ ಹೆಚ್ಚಿನದೋ. ನನ್ನ ಮನೆ ಹೆಚ್ಚಿನದೋ ಎಂದು ಅಂದ ಕ್ಷಣವೇ ಸಾವುಕಾರನಿಗೆ ನಾಚಿಕೆ ಬಂತು. ಅದರಂತೆ ನೀನು ಮಾಡಬೇಡ ತಂಗೀ ಮನೆ ಮುಂದೆ ಬರುವದು ಹೆಂಗಸರಿಂದ, ಹಿಂದೆ ಉಳಿಯುವದು ಹೆಂಗಸರಿಂದ. ನೀನು ಚನ್ನಾಗಿ ತಿಳಿದು ಸಾವುಕಾರನ ಹೆಂಡತಿಯಂತೆ ಗರ್ವಿಷ್ಟಿ ಆಗಬೇಡ ಎಚ್ಚರದಿಂದಾ ಇರು.

## ನಿನಗೆ ಭೂಷಣ ಯಾವದು

**ಸುಕುಮಾರೀ,**

ನಿನಗೆ ಭೂಷಣ ಯಾವದು ಗೊತ್ತುಂಟೇ? ಸರಗಿ, ಸರ, ವಂಕಿ, ಸರಪಳಿ, ಪೈಜಣ, ವಡ್ಯಾಣ, ವಾಲಿ, ಬುಗಡಿ, ಸರದಾಳಿ, ಚಪಲಾ ಹಾರಗಳೂ, ಹಸರು ಹಳದಿ, ಕೆಂಪು, ನೀರಲ, ಜರತಾರಿ ಶಾಲು, ಪೀತಾಂಬರಗಳೂ ನಿನಗೆ ಭೂಷಣವಲ್ಲ. ನಿನಗೆ ಭೂಷಣವಾದ ವಸ್ತು ಬೇರೆ ಇರುತ್ತದೆ. ಚಿತ್ತವಿಟ್ಟು ಕೇಳು ಹೇಳುತ್ತೇನೆ. ನಿನಗೆ ಸದ್ಗುಣವೆಂಬ ಸಮ್ಯಗ್ದರ್ಶನ, ಸಮ್ಯಗ್ದಜ್ಞಾನ, ಸಮ್ಯೆಕ್ಚಾರಿತ್ರ, ರತ್ನತ್ರಯುಗಳಿಂದ ಭೂಷಣ, ಈ ಮೂರು ರತ್ನತ್ರಯುಗಳು ಮಾತ್ರ ನಿನಗೆ ಆಭರಣಗಳು. ವಸ್ತು-ಒಡವೆ, ಸೀರೆ ಕುಪ್ಪಸಗಳು ನಿನ್ನನ್ನು ವಂಚಿಸುವ ವಸ್ತುಗಳು. ಇವುಗಳ ಮೇಲೆ ಮೋಹಿತಳಾಗದೆ, ದೇವ, ಶಾಸ್ತ್ರ, ಗುರುಗಳಲ್ಲಿ ಶ್ರದ್ಧಾಪೂರ್ವಕ ಭಕ್ತಿ ಇಡುವದೇ ಸಮ್ಯಕ್ತ್ವವು.

ಈ ಸದ್ಗುಣವನ್ನು ಕಲಿತುಕೋ. ಮತ್ತು ಮನೆಯಲ್ಲಿ ಗಂಡ, ಅತ್ತೆ, ಮಾವ, ಮೈದುನ, ನಾದಿನಿಯರ ಕೂಡ ಮತ್ತು ನೆರೆ ಹೊರೆಯವರ ಕೂಡ ಸೈ, ಸೈ, ಅನ್ನುವಂತೆ ನಡೆದುಕೋ. ಬಹಳ ಹೇಳುವದೇನು ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಕೀರ್ತಿ ಬರುವಂತೆ ನಡೆದು ಕೊ. ತಂಗೀ ಹಿಂದಕ್ಕೆ ಸೀತೆ, ಸಾವಿತ್ರಿ, ಅನುಸೂಯಾ, ದಮಯಂತಿ, ಮಂಡೋಧರಿ, ದ್ರೌಪದಿ, ಅಂಜಿನಾದೇವಿ ಮುಂತಾದ ಸ್ತ್ರೀಯರು ಹೆಸರು ವಾಸಿಗಳಾಗಿ ಸ್ತ್ರೀ ಧರ್ಮದಿಂದ ನಡೆದು ಲೋಕಕ್ಕೆ ತಮ್ಮ ಪತಿವೃತಾ ಧರ್ಮ ತೋರಿಸಿದರಲ್ಲದೆ ತಮ್ಮ ಸ್ತ್ರೀಲಿಂಗ ಛೇದನೆ ಮಾಡಿ ಸ್ವರ್ಗ ಮೋಕ್ಷ ಸುಖವನ್ನು ಪಡೆದರು. ಇಂಥವರ ಚರಿತ್ರೆಯನ್ನು ಮೇಲಿಂದ ಮೇಲೆ ತರಿಸಿ ಓದಿ ಆದರಂತೆ ನಡೆಯಲಿಕ್ಕೆ ಪ್ರಯತ್ನ ಮಾಡುವದೇ ಪತಿವ್ರತೆಯರ ಕರ್ತವ್ಯವು.

## ಗಂಡಸರ ಸಲಿಗೆ ಬೇಡ

**ಕುಶಲಮತಿ,**

ನಿನಗೆ ಗಂಡಸರ ಸಲಿಗೆ ಎಷ್ಟು ಮಾತ್ರವೂ ತರವಲ್ಲಾ. ಪರ ಗಂಡಸರೊಂದಿಗೆ ಏಕಾಂತದಲ್ಲಿ ಕುಳಿತು ಮಾತನಾಡಬೇಡ. ಇದರಿಂದ ಜನರಿಗೆ ಅನೇಕ ತರದ ಸಂಶಯವು ಬರುವದು. ನಾವು ಅಣ್ಣ ತಂಗಿಯರಂತೆ ಇರುವೆವು. ಜನರು ಬೇಕಾದಂತೆ ಅನ್ನಲಿ ಅಂತಾ ಲಜ್ಜೆ ತೊರೆದು ಏಕಾಂತದಲ್ಲಿ ಕುಳಿತುಕೊಳ್ಳಬೇಡ, ಮನಕೂ ಅಂಜಬೇಕು. ಜನಕೂ ಅಂಜಬೇಕು, ಜನರಲ್ಲಿ ಅನೇಕ ತರದ ಕಲ್ಪನೆ ಉತ್ಪತ್ತಿ ಆಗುತ್ತವೆ. ಇದಕ್ಕೆ ಉದಾಹರಣಾರ್ಥ ಒಂದು ಸಣ್ಣ ಕತೆಯನ್ನು ಹೇಳುತ್ತೇನೆ ಚಿತ್ತವಿಟ್ಟು ಕೇಳು.

ಒಂದು ಊರ ಸಂತೆಯಲ್ಲಿ ಪ್ರಾಯದ ಗಂಡು ಹೆಂಡಿರು ತಮಗೆ ಬೇಕಾದ ಸಾಮಾನು ಕೊಳ್ಳಲು ಬಂದಿದ್ದರು. ಅವರು ಪೇಟೆ-

ಯಲ್ಲಿ ಮಾತನಾಡುತ್ತ ನಿಂತಿರುವಷ್ಟರಲ್ಲಿ ಇಬ್ಬರು ವ್ಯಭಿಚಾರಿಗಳು ಬಂದರು. ಇವರನ್ನು ನೋಡಿ ಇವರಿಬ್ಬರು ಗೆಣತಿ ಗೆಣ್ಯಾ ಇರಬಹುದು ಎಂದು ಕಲ್ಪಿಸಿದರು. ಮತ್ತೊಬ್ಬ ಸದ್ಗೃಹಸ್ಥನು ಬಂದು ಇವರನ್ನು ನೋಡಿ ಇವರು ದಂಪತಿಗಳು ಇರಬಹುದು ಎಂದು ಅಂದನು. ಮತ್ತೊಬ್ಬ ವಯೋವೃದ್ಧನು ಇವರನ್ನು ನೋಡಿ ಇವರು ಅಣ್ಣಾ ತಂಗಿಯರಿರಬಹುದು ಎಂದನು. ಈ ಪ್ರಕಾರ ಲೋಕದಲ್ಲಿ ಜನರಿಗೆ ಅನೇಕ ಕಲ್ಪನೆಯಾಗುತ್ತವೆ. ಆದ್ದರಿಂದ ತಂಗೀ ನೀನು ಬಹಳ ಎಚ್ಚರದಿಂದ ಇರು. ಇನ್ನು ಕೆಲವು ಹೆಣ್ಣು ಮಕ್ಕಳು ಮೇಲೆ ಅಣ್ಣಾ ಅಪ್ಪಾ ಎಂದು ಕರಯುವರು. ಒಳಗಿಂದೊಳಗೆ ಕೆಟ್ಟ ಕೃತ್ಯ ಮಾಡುತ್ತಾರೆ. ಹೆಣ್ಣು ಮಕ್ಕಳು ಇಂಥಾ ನೀಚ ಕೃತ್ಯ ಸರ್ವಥಾ ಮಾಡಬಾರದು. ಮತ್ತು ಅಕ್ಕನ ಗಂಡ, ತಂಗಿಯ ಗಂಡ, ಸೋದರ ಮಾವ ಮೊದಲಾದವರೊಡನೆ ಕುಚೇಷ್ಟಿ ಮಾಡಬಾರದು. ಮರ್ಯಾದೆಯಿಂದ ಮಾತಾಡಬೇಕು. ಪರಗಂಡಸರೊಂದಿಗೆ ಎಲ್ಲಿಗೂ ಪ್ರಯಾಣಕ್ಕೆ ಹೋಗಬೇಡಿರಿ. ಆದಷ್ಟು ಎಚ್ಚರದಿಂದಾ ಇರಬೇಕು. ಬಹಳ ಹುಷಾರದಿಂದಾ ಸ್ತ್ರೀ ಪರ್ಯಾಯವನ್ನು ರಕ್ಷಿಸಿಕೊಳ್ಳಬೇಕು. ಇದೇ ನಿನಗೆ ಭೂಷಣವು. ಇದೇ ಪತಿವೃತಾ ಸ್ತ್ರೀಯರ ಲಕ್ಷಣವು.

## ಗಂಡ ಏಕೆ ಸೇರುವದಿಲ್ಲ ?

**ಎಲೆ ಹುಚ್ಚೀ,**

ನೀನು ಮಂದಿಯ ಮುಂದೆ ನನ್ನ ಗಂಡ ಬೈಯುತ್ತಾನೆ. ನನ್ನ ಗಂಡ ಒಳ್ಳೆಯವನದಲ್ಲ ಎಂದು ದೂರುತ್ತೀ ಇದು ಒಳ್ಳೆಯದಲ್ಲ. ಅವನು ಏಕೆ ಹೊಡೆಯುತ್ತಾನೆ, ಏಕೆ ಬೈಯುತ್ತಾನೆ ಅವನ ಮಾತು ಕೇಳದಿದ್ದರೆ, ಅವನ ಇಚ್ಛೆಯಂತೆ ನಡೆಯದಿದ್ದರೆ ಅವನು ಹಾಗೆ ಮಾಡುತ್ತಾನೆ. ನಿನ್ನ ತಪ್ಪು ನೀನು ಹೇಳದೆ ಅವನ ತಪ್ಪು ನೀನು ಹೇಳುತ್ತೀ, ಪತಿಯ ನಿಂದೆಯು ಒಳಿತಲ್ಲ. ಪತಿಯು ನಿನಗೆ ಬಯ್ಯು

ದಂತೆ ನಡೆ. ಅವನ ಹೃದಯು ಕರಗುವಂತೆ ನಡೆ. ಅವನ ತಪ್ಪನ್ನು ಹುಡುಕಿ ನೀನು ಮಾಡುವದೇನು. ಗಂಡನ ತಪ್ಪನ್ನು ಹುಡುಕುವವಳು ಸತಿಯಲ್ಲ. ಗಂಡನು ನಿನ್ನನ್ನು ಬಿಟ್ಟರೆ ನಿನಗೆ ಬಹಳ ಕಠಿಣವಾದೀತು. ಹೆಂಗಸರ ಒರಟುತನದಿಂದ ಎಷ್ಟೋ ಗಂಡ ಹೆಂಡರ ಬಿಡುಗಡೆಯಾಗಿರುವವು. ಈ ಅನ್ಯಾಯುವನ್ನು ನಾನು ಮಾಡಲಾರೆ. ನೀನು ವರ್ತಮಾನ ಪತ್ರದಲ್ಲಿ ಬಿಡುಗಡೆ ನೋಟೀಸು ನೋಡಿಲ್ಲವೇ ? ಸರಕಾರದವರು ದ್ವೀ ಪತ್ನಿ ಪ್ರತಿಬಂಧಕ ಬಿಲ್ಲು ಪಾಸು ಮಾಡಿರುವರು. ಇಷ್ಟಾದರೂ ಗಂಡ ಹೆಂಡಿರ ನೋಟೀಸು ವರ್ತಮಾನ ಪತ್ರದಲ್ಲಿ ಇನ್ನೂ ನಿಂತಿಲ್ಲ ಕಾರಣ ಗಂಡನ ಕೂಡ ಯಾವ ತಂಟೆ ಮಾಡದಲೇ ನಡಿಯುಬೇಕು. ಅಂತಾ ನಾನು ಈ ಭಾರತಿಯು ಮಹಿಳೆಯರಿಗೆ ವಿನಯು ಪೂರ್ವಕವಾಗಿ ಬೇಡಿಕೊಳ್ಳುತ್ತೇನೆ. ಅಂತೂ ಗಂಡನ ಮನಸ್ಸು ನೋಯದಂತೆ ನಡೆಯುಬೇಕು.

## ತೌರು ಮನೆಯೊಳಗಿರಬೇಡ

**ಎಲೆ ಜಾಣೆಯೇ,**

ಗಂಡನ ಹೊರತಾಗಿ ತೌರು ಮನೆಯೊಳಗಿರಬೇಡ. ತೌರು ಮನೆಯಲ್ಲಿ ಸಕ್ಕರಿ ತುಪ್ಪ ಉಣ್ಣುವದಕ್ಕಿಂತ, ಗಂಡನ ಮನೆಯಲ್ಲಿ ಅಂಬಲಿ ಮಜ್ಜಿಗೆ ಉಣ್ಣುವದು ಲೇಸು. ಗಂಡನು ಬೈಯಲಿ ಅಥವಾ ಹೊಡೆಯಲಿ ಗಂಡನ ಮನೆಯಲ್ಲಿ ಪ್ರಾಣ ಬಿಡುವದು ಲೇಸು ನೋಡಿರಿ. ಹಿಂದಕ್ಕೆ ಮಹಾ ಪತಿವ್ರತಾ ಸ್ತ್ರೀಯಾದ ಸೀತೆಯು ಗಂಡನು ವನವಾಸಕ್ಕೆ ಹೋದಾಗ ಆಕೆಯು ಜನಕ ರಾಜನ ಮನೆಯನ್ನು ಸೇರಿದಳೇ? ಇಲ್ಲ. ಪಾಂಡವರ ಪತ್ನಿಯಾದ ದ್ರೌಪದಿಯು ಪಾಂಡವರಿಗೆ ವನವಾಸವಾದರೂ ಅವರ ಕೂಡ ವನವಾಸ ಭೋಗಿಸಿದಳೇ ಹೊರತು ತಂದೆಯಾದ ದ್ರುಪದ ರಾಜನ ಮನೆ ಸೇರಲಿಲ್ಲ. ತವರು ಮನೆ ಸೇರುವದು ಪತಿವ್ರತಾ ಸ್ತ್ರೀಯರ ನಡತೆಯಲ್ಲಾ ಇದನ್ನು ತಿಳಿದು ತವರ ಮನೆಗೆ

ಹೋಗುವದಕ್ಕೆ ಗಂಡನ ಅಪ್ಪಣೆ ಇಗಲಿ। ಅಥವಾ ತಾಯಿಯರದಿರಲಿ। ತವರ ಮನೆಯಲ್ಲಿ ಸರ್ವಥಾ ಇರಬೇಡ. ಒಂದು ಪಕ್ಷಕ್ಕೆ ತವರು ಮನೆಯಲ್ಲಿಯೇ ಹೆಚ್ಚು ದಿವಸ ಕಳೆದರೆ ಅಕಸ್ಮಾತ ಗಂಡನ ಬುದ್ಧಿ ಬದಲಾಯಿಸಿ ಪರಸ್ತ್ರೀ ಸಂಗದಲ್ಲಿ ಬಿದ್ದರೆ ಅದನ್ನು ಬಿಡಿಸುವದು ಬಹಳ ಕಠಿಣ ಆದೀತು. ಅದರಿಂದಾ ಧರ್ಮ ಭ್ರಷ್ಟ ಆಗುವ ಪ್ರಸಂಗ ಬಂದರೂ ಬರಬಹುದು. ಇದನ್ನೆಲ್ಲಾ ಬಹಳ ಎಚ್ಚರದಿಂದಾ ತಿಳಿದು ನೋಡು ಈ ಮಾತನ್ನೂ ಬಹಳ ಲಕ್ಷದ ಲ್ಲಿಡು. ಬಹಳ ಹೇಳುವದೇನು ಗಂಡ ಬೈಯುವ ಕಾರಣ, ಗಂಡ ಹೊಡೆಯುವ ಕಾರಣ ನೀನು ಚನ್ನಾಗಿ ತಿಳಿದುಕೊಳ್ಳಬೇಕು. ಒಂದು ಪಕ್ಷಕ್ಕೆ ನೀನು ಒಳ್ಳೆವಳು ನಿನ್ನ ಗಂಡನು ಬಹಳ ಕೆಟ್ಟವನು ಎಂದು ತಿಳಿಯೋಣ. ನಿನ್ನ ಒಳ್ಳೆಯ ಗುಣದಿಂದ ಅವನ ಕೆಟ್ಟ ಗುಣಗಳನ್ನು ತಿದ್ದಲು ಪ್ರಯತ್ನ ಮಾಡು. ವ್ರತ ಉಪವಾಸಗಳನ್ನು ಮಾಡು. ದೇವರೇ ನನ್ನ ಗಂಡನಿಗೆ ಒಳ್ಳೇ ಬುದ್ಧಿಯನ್ನು ಕೊಡು ಎಂದು ಪ್ರಾರ್ಥಿಸು. ನೀನು ನಿನ್ನ ಗಂಡನ ಪಾದಕ್ಕೆ ನಮಸ್ಕಾರ ಮಾಡಿ ಪತಿ ದೇವಾ ನಾನು ಧಡ್ಡಿ ನಾನು ನಿಮ್ಮಂತೆ ಜಾಣೆಯಲ್ಲ ನನ್ನ ತಪ್ಪುಗ ಳನ್ನು ಕ್ಷಮಾ ಮಾಡಿರಿ ನನಗೆ ಬೈಯಬೇಡಿರಿ, ನನಗೆ ಹೊಡೆಯ ಬೇಡಿರಿ. ನಾನು ನೀವು ಹೇಳಿದಂತೆ ಕೇಳುವೆನು ಎಂದು ಬೇಡಿಕೋ. ಅಂದರೆ ಅವನ ಮನಸ್ಸು ಕರಗಿ ನಿನ್ನನ್ನು ಅವನು ಕ್ಷಮಿಸುವನು. ಕೆಲವು ಗಂಡಸರು ಬಹಳ ಸೂಕ್ಷ್ಮ ಇರುತ್ತಾರೆ. ಊಟಕ್ಕೆ ಇಡು ವದು,— ತಡವಾದರೆ, ತಲೆಯ ಮೇಲಿನ ಶೆರಗು ಬಿದ್ದಿದ್ದರೆ, ಪರ ಗಂಡಸರೊಡನೆ ಮಾತಾಡುತ್ತ ನಿಂತಿದ್ದರೆ, ಅವನು ಹೊರಗಿನಿಂದ ಬಂದ ಕೂಡಲೆ ನೀನು ಬಂದು ಮಾತಾಡಿಸದಿದ್ದರೆ, ನೀನು ಹೇಳದೆ ಎಲ್ಲಿಗಾದರೂ ಹೋಗಿದ್ದರೆ, ನೀನು ಅವನಿಗೆ ಅಪಮಾನದ ಮಾತು ಗಳನ್ನಾಡಿದರೆ ಇವೇ ಮೊದಲಾದ ಸಣ್ಣ ಸಣ್ಣ ತಪ್ಪುಗಳು ನಿನ್ನಲ್ಲಿ ಕಂಡು ಬಂದರೆ ಅಷ್ಟಕ್ಕೆ ಗಂಡನು ಮಾತು ಬಿಡಬಹುದು, ಊಟ

ಬಿಡಬಹುದು, ಇಲ್ಲವೆ ನಿನ್ನನ್ನು ಬಿಟ್ಟು ತವರ ಮನೆಗೆ ಕಳಿಸಿ ಬಿಡಬಹುದು. ಇವೇ ಮುಂತಾದ ಅನಿಷ್ಟ ಪ್ರಸಂಗಗಳು ನಿನಗೆ ಬಂದು ಬಿಡುವವು. ಕಾರಣ ನೀನು ಬಹಳ ಸೂಕ್ಷ್ಮವತಿಯಾಗಿರಬೇಕು. ಮೈಯಲ್ಲಾ ಎಚ್ಚರ ಇರಬೇಕು.

## ಅತ್ತಿಯರೊಡನೆ ಎಂತಿರಬೇಕು

ನನ್ನ ಮುದ್ದು ಮಗಳೇ,

ಪದ್ಯ

|| ಅತ್ತಿಯ ಮನಿಯಾಗ ಮುತ್ತಾಗಿ ಇರಬೇಕ. ಹೊತ್ತ ನೀಡಿದರ
ಉಣಬೇಕ || ಹೊತ್ತ ನೇಡಿದರ ಉಣಬೇಕ ಹಡೆದವ್ವ ಹೆತ್ತವರ
ಹೆಸರ ತರಬೇಕು ||

ಇದರಂತೆ ಕೊಟ್ಟ ಮನೆಗೂ ಹುಟ್ಟಿದಮನೆಗೂ ಕೀರ್ತಿ ತರುವದು ಹೆಣ್ಣು ಮಕ್ಕಳ ಧರ್ಮವಾಗಿರುತ್ತದೆ. ತಂಗೀ ನೀನು ಈ ಪ್ರಕಾರ ನಡೆದುಕೋ. ಅತ್ತೆಯ ಮಾತನ್ನು ಎಂದೂ ಮೀರಬೇಡ. ತಿರುಗಿ ಅವರಿಗೆ ಉತ್ತರ ಕೊಡಬೇಡ. ಒತ್ತಿ ಅವರಿಗೆ ಏನೂ ಹೇಳಬೇಡ. ಅವರಿಗೆ ಸಿಟ್ಟು ಮಾಡಬೇಡ. ಅತ್ತೆ ಬಯ್ಯದಂತೆ ಮತ್ತು ಬಡಿಯದಂತೆ ನಡೆದುಕೋ.

ಅತ್ತೆಯನ್ನು ನೀನು ಹೆತ್ತವ್ವನಂತೆ ತಿಳಿದುಕೊಳ್ಳಬೇಕು. ಅತ್ತೆಯನ್ನು ಕೇಳದೆ ಏನೂ ಮಾಡಬೇಡ. ಅತ್ತೆ ಕೆಟ್ಟವಳಿದ್ದರೂ ಒಳ್ಳೆಯವಳನ್ನಾಗಿ ಮಾಡಿಕೊಳ್ಳುವ ಭಾಗವು ನಿನ್ನದು. ಅತ್ತೆ ಒಳ್ಳೆಯವಳಲ್ಲವೆಂದು ನೀನು ಮಂದಿಯ ಎದುರಿಗೆ ಹೇಳುವದಕ್ಕಿಂತ ನಾನೇ ಒಳ್ಳೆಯವಳಲ್ಲವೆಂದು ಯೋಚಿಸು. ನಿನ್ನ ಗುಣಕ್ಕೆ ಅತ್ತೆಯ ಗುಣಕ್ಕೆ ಕೂಡದಿರಬಹುದು. ಅತ್ತಿಯ ಗುಣದಂತೆ ಕೂಡಿ ನಡೆ. ಕೆಲವು ಹೆಣ್ಣು ಮಕ್ಕಳು ಅತ್ತೆಯೊಡನೆಯೂ, ಕೆಲವು ಅತ್ತೆಯರು ಸೊಸೆಯರೊಡನೆಯೂ ಪ್ರೀತಿಯಿಂದ ಕೂಡಿ ನಡೆಯುವರು. ಅಂಥವರು ಸಿಗುವದು

ಬಹಳ ದುರ್ಲಭ. ಮನೆ ಮನೆಗೂ ಮುತ್ತಿನಂತಹ ಅತ್ತೆ ಸೊಸೆಯರಿರ ಬೇಕು. ಯಾವ ಮನೆಯಲ್ಲಿ ನೋಡಿದರೂ ಅತ್ತೆ ಸೊಸೆಯರ ಜಗಳ ಕೇಳಬರುವದು. ಇದು ಯಾರ ದುರ್ದೈವವು ತಿಳಿಯದು. ಅತ್ತೆಗೂ ಶಿಕ್ಷಣವಿಲ್ಲ ಸೊಸೆಗೂ ಶಿಕ್ಷಣವಿಲ್ಲ ಒಬ್ಬರಿಗೊಬ್ಬರ ತಾಳಮೇಳ ಇಲ್ಲ. ಅತ್ತೆ ಎಂಬ ಹೆಮ್ಮೆ ಅತ್ತೆಗಿರಬಾರದು. ಸೊಸೆ ಎಂಬ ಹೆಮ್ಮೆ ಸೊಸೆ ಗಿರಬಾರದು. ಸೊಸೆ ಮುದಿ ಅತ್ತೆಯ ಮೇಲೆ ಅಧಿಕಾರ ನಡೆಸ ಬಾರದು. ಇಬ್ಬರು ತಾಯಿ ಮಕ್ಕಳಾಗಿ ನಡೆದುಕೊಳ್ಳಬೇಕು. ಒಟ್ಟಿನ ಮೇಲೆನೀನೂ ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು.

## ಅತ್ತಿಗೆ, ನಾದಿನಿ, ನೆಗೆಣ್ಣಿ, ಸವತಿ ಮಕ್ಕಳೊಡನೆ ಎಂತಿರಬೇಕು

**ನನ್ನ ಗಿಳಿಯೇ**

ನೀನು ಮೊದಲು ತವರ ಮನೆಯಲ್ಲಿ ಅಣ್ಣನ ಹೆಂಡತಿ ಅತ್ತಿಗೆ, ತಮ್ಮನ ಹೆಂಡತಿ ನಾದಿಣಿ ಇವರೊಡನೆ ಜಗಳಾಡಬೇಡ ಅವರದು—ಇವರಿಗೆ, ಇವರದು—ಅವರಿಗೆ ಚಾಡಿ ಹೇಳಬಾರದು. ಸಣ್ಣ ಮಗ ಳಾಗಿ ಎಲ್ಲರ ಪ್ರೀತಿಗೆ ಪಾತ್ರಳಾಗಬೇಕು. ಗಂಡನ ಮನೆಯಲ್ಲಿ ಬಂದ ತರುವಾಯ ನೆಗೆಣ್ಣಿ ಮಕ್ಕಳು, ಗಂಡನ ತಂಗಿ, ಮೊದಲಾದ ವರೊಡನೆ ನೀನು ಇರಬೇಕಾದ ಪ್ರಸಂಗದಲ್ಲಿ ಒಬ್ಬರಿಗೊಬ್ಬರು ಮನಸ್ಸಿನಲ್ಲಿ ಬೇಜಾರ ಆಗದಂತೆ ನಡೆಕೊಳ್ಳಬೇಕು. ಎಲ್ಲರೂ ಅಕ್ಕ ತಂಗಿಯರಂತೆ ಇರಬೇಕು.

ನೀನು ಎಲ್ಲರನ್ನೂ ಸಂಭಾಳಿಸಿಕೊಳ್ಳಬೇಕು. ನಿನ್ನ ಗಂಡನು ಮದುವೆಯಾದ ಮತ್ತೊಬ್ಬ ಹೆಂಡತಿಯುನ್ನು ನಿನ್ನ ಸ್ವಂತ ಅಕ್ಕ ತಂಗಿಯರಂತೆ ತಿಳಿದು ನಡೆಯಬೇಕು. ಇಬ್ಬರಿಗೂ ಭೇದ ಮಾಡ ಬಾರದು. ಮುಖ್ಯವಾಗಿ ನೀನು ಎಲ್ಲರಿಗೂ ಗಿಳಿಯಾಗಬೇಕು.

ಅವರು ನಿನ್ನನ್ನು ಪ್ರೀತಿಸದಿದ್ದರೂ ನೀನು ಅವರನ್ನು ಪ್ರೀತಿಸಬೇಕು. ಅವರ ಮನ ಕರಗುವಂತೆ ನಡೆಯಬೇಕು. ಅವರು ಕರಕರೆ ಮಾಡಿದರೆ ನೀನು ಅದನ್ನು ಉಪಾಯದಿಂದ ಸಹನಮಾಡಬೇಕು. ಅವರು ಸಿಟ್ಟಿಗೆದ್ದರೆ ಸುಮ್ಮನಿರಬೇಕು. ಅವರು ಬೈದರೆ ಬಡಿದರೆ ಶಾಂತಿಯಿಂದ ತಾಳಿಕೊಳ್ಳಬೇಕು. ಸತ್ಯಾಗ್ರಹದ ಚಳಿವಳಿಯಲ್ಲಿ ತರುಣ ತರುಣಿಯರು ಸರಕಾರದ ಲಾಠಿಯ ಹೊಡೆತವನ್ನು ತಡೆದುಕೊಂಡುದನ್ನು ನೀನು ಅರಿಯೆಯಾ ? ಕೆಲಕಾಲ ಅತ್ತೆಯರೂ, ಅತ್ತಿಗೆ ನಾದಿನಿಯರೂ ಸವತಿ ಮಕ್ಕಳೂ ಬಹಳ ದುಷ್ಟ ಇರುತ್ತಾರೆ. ಇವಗ ಹಿಂಸೆಯಿಂದ ಕೆಲವು ಸೊಸೆಯರು ಬಹಳ ತೊಂದರೆಯೊಳಗೆ ಬಿಳುತ್ತಾರೆ. ಕೆಲವು ಸೊಸೆಯರು ಹಟಮಾರಿಗಳೂ, ಸೋಮಾರಿಗಳೂ ಜಗಳಗಂಟರೂ ಇರುತ್ತಾರ. ಅತ್ತೆಯವರು ಎಷ್ಟು ಬುದ್ಧಿ ಹೇಳಿದರೂ ಕೇಳುವದಿಲ್ಲ. ತಮ್ಮದೇ ಹಟವನ್ನು ನಡೆಸುತ್ತಾರೆ. ಮನೆಯೊಳಗಿನ ಕೆಲಸ ಬೊಗಸೆಗಳನ್ನೂ ಸರಿಯಾಗಿ ಮಾಡುವದಿಲ್ಲ. ಮಂದಿಯ ಮುಂದೆ ನಮ್ಮ ಅತ್ತೆ ಉರಿಸುತ್ತಾಳೆ ಎಂದು ಬೈಯುತ್ತಾರೆ. ಅತ್ತೆಯವರು ಸೊಸೆಯನ್ನು ಉರಿಸುವದು ಎದ್ದು ಕಾಣಿಸುತ್ತದೆಯೇ ಹೊರತು, ಸೊಸೆಯರು ಮಾಡುವ ಕಾರಭಾರವು ಯಾರಿಗೂ ತಿಳಿಯುವದಿಲ್ಲ.

## ಪತಿಯೊಡನೆಂತಿರಬೇಕು

**ನನ್ನ ಬಂಗಾರ,**

ಕೇಳಿಲ್ಲಿ. ಎಲ್ಲಕ್ಕೂ ಮಹತ್ವವಾದ ಒಂದು ಮಾತು ನಿನಗೆ ಹೇಳುವೆನು. ಗಂಡನಿಗೆ ಬೇಡವಾದರೆ ಗುಂಡು ಕಲ್ಲಿಗೂ ಬೇಡವೆಂಬ ನಾಣ್ಣುಡಿಯುಂಟು. ಕಾರಣ ನೀನು ಪತಿಯ ಪ್ರೀತಿಯನ್ನು ಮೊದಲು ಗಳಿಸಿಕೊಳ್ಳಬೇಕು. ನೀನು ಪತಿಯ ನೆರಳಿನಂತಿರಬೇಕು. ಮನಸ್ಸಿನಲ್ಲಿ ಯಾವಾಗಲೂ ಪತಿಯ ಧ್ಯಾನವಿರಬೇಕು. ಪತಿಯು ಹೊರಗಿನಿಂದ ಬಂದರೆ ಎದ್ದು ನಿಲ್ಲಬೇಕು. ಜಾರಿಬಿದ್ದ ಸೆರಗು ಸಾವರಿಸಿ

ಕೊಳ್ಳಬೇಕು. ಪತಿಯು ಪಕ್ಕದಲ್ಲಿ ನಿಂತು ಆತನ ಹಸಿವೆ ಬಾಯಾರಿಕೆ ಗಳನ್ನು, ಸುಖದುಃಖಗಳನ್ನು ವಿಚಾರಿಸಬೇಕು. ಕುಲು ಕುಲು ನಗುತ್ತಲಿರಬೇಕು. ಬೇಸತ್ತ ಬಂದ ಪತಿಯುನ್ನು ನಗಿಸಬೇಕು. ಆತನು ಸಿಟ್ಟಿಗೆದ್ದು ಮಾತನಾಡಿದರೆ ನೀನು ಶಾಂತರೀತಿಯಿಂದ ನೆಲ ವನ್ನು ನೋಡುತ್ತಿರಬೇಕು.

## ನನ್ನ ಶ್ರಿಂಗಾರ

ಪತಿಯೊಡನೆ ನಿನಗೆ ಛಲಬೇಡ, ನೀವಿಬ್ಬರೂ ಸರಳ ಮಾರ್ಗ ದಿಂದ ನಡೆಯಿರಿ. ಪತಿಯು ಹೇಳಿದಂತೆ ಕೇಳು. ಅವನ ಮಾತು ನಿನಗೆ ಹಿತವಿರಲಿ ಅಥವಾ ಅಹಿತವಿರಲಿ ಮೀರಬೇಡ. ಹೇಳಿದಂತೆ ಕೇಳುವದೇ ದಿವ್ಯ ಮಂತ್ರ. ಪತಿಯನ್ನು ಕೇಳದಲೇ ಏನೂ ಮಾಡಬೇಡ. ಕೊಳ್ಳುವ ದಾಗಲಿ, ಕೊಡುವದಾಗಲಿ, ಹೋಗುವದಾಗಲಿ ಬರುವದಾಗಲಿ ಮುಂತಾದ ಕೆಲಸವನ್ನು ಪತಿಯುನ್ನು ಕೇಳದೇ ಮಾಡಬೇಡ. ನಿನ್ನ ಪತಿಯ ಮನಸ್ಸಿಗೆ ಬಾರದ ನಡೆಯಾಗಲಿ, ನುಡಿಯಾಗಲಿ, ಉಡಿಗೆ ಯಾಗಲಿ,, ತೊಡಿಗೆಯಾಗಲಿ ಮಾಡಬೇಡ. ಅವನ ಮನವನ್ನು ಚನ್ನಾಗಿ ಅರಿತು ಅವನ ಇಚ್ಛೆಯಂತೆ ನಡೆ. ಅವನಿಗೆ ವಂಚನೆ ಮಾಡಬೇಡ.

## ನನ್ನ ಗೌರೀ,

ಪತಿಯೊಡನೆ ವಾದಿಸಬೇಡ. ಪತಿಯ ಎದುರಿಗೆ ಎದೆ, ತಲೆ, ತೆರೆಯುಬೇಡ, ಕಾಲು ಚಾಚಿ ಕುಳ್ಳಿರಬೇಡ. ಪತಿಯು ಕೆಳಗೆ ಕುಳಿ ತಾಗ ನೀನು ಮಂಚ, ಖುರ್ಚಿ ಮೊದಲಾದವುಗಳ ಮೇಲೆ ಎತ್ತರ ದಲ್ಲಿ ಕೂಡ್ರಲು ಬೇಡ, ಮಲಗಲೂ ಬೇಡ, ಆತನ ಎದುರಿಗೆ ತಲೆ ತುರಿಸಿಕೊಳ್ಳಬೇಡ, ಕೆಮ್ಮುವದು, ಗಾರುವದು, ಉಗುಳುವದು ಮಾಡಬೇಡ. ಒಟ್ಟನಲ್ಲಿ ಗಂಡ ನನ್ನವನೆಂದು ಲಜ್ಜೆ ತೊರೆದು ಮನ ಬಲ್ಲ ಹಾಗೆ ವರ್ತಿಸಬೇಡ. ಗಂಡನ ಸಲಿಗೆ ಎಷ್ಟಿದ್ದರೂ ನೀನು ಆತ ನಿಗೆ ಅಷ್ಟು ಅಂಜಿ ನಡೆಯಬೇಕು. ಇದೇ ಪತಿ ಭಕ್ತಿ.

|| ಶ್ರೀವೀತರಾಗಾಯನಮಃ ಶ್ರೀಚಂದ್ರನಾಥಾಯನಮಃ ||

# ಆಹಾರ ದಾನದ ಮಹತ್ವ

ನನ್ನ ಮಗಳೇ ನಿನಗೆ ಇನ್ನೊಂದು ಮಹತ್ವದ ಮಾತು ಹೇಳು ತ್ತೇನೆ ಕೇಳು. ಮನುಷ್ಯ ಜನ್ಮದಲ್ಲಿ ಸತ್ಪಾತ್ರ ಸಿಗುವದು ಅತಿ ದುರ್ಲಭ. ಆದ್ದರಿಂದ ಪಾತ್ರಗಳು ಸಿಕ್ಕಾಗ ಮಾತ್ರ ಬಿಡಬೇಡಾ, ನನಗೆ ಅಡಚನಿ ಇರುತ್ತದೆ ಎಂದು ಅನ್ನಬೇಡಾ. ಆಹಾರ ದಾನವು ಜಗತ್ತಿನಲ್ಲಿ ಹೆಚ್ಚಿನದಾಗಿರುತ್ತದೆ. ಅದರಲ್ಲಿ ಮುಂದಾಳುವಾಗು. ಹಿಂದೆ ಸರಿಯ ಬೇಡಾ. ಅನ್ನದಾನ ವೈಭವವನ್ನು ಎಷ್ಟಂತು ಹೇಳಲಿ ಹಿಂದಕ್ಕೆ ಭರತೇ ಶ್ವರನು ಷಟ್ಖಂಡ ಪತಿಯಾಗಿದ್ದರೂ ಆಹಾರ ದಾನ ಮಾಡುವಾಗ್ಯೆ ದೀನತನದಿಂದ ಬೇಡಿಕೊಂಡು ಆಹಾರ ದಾನ ಮಾಡುತ್ತಿದ್ದನು. ಆದರೆ ಈ ಪಂಚಮ ಕಾಲದಲ್ಲಿ ಅವನಷ್ಟು ಸಂಪತ್ತು ಯಾರಿಗೂ ಇಲ್ಲ. ಈ ಕಾಲದಲ್ಲಿ ಸಂಪತ್ತಿ ಇದ್ದರೆ ಸಂತತಿ ಇರುವದಿಲ್ಲ. ಸಂತತಿ ಇದ್ದರೆ ಸಂಪತ್ತಿ ಇರುವದಿಲ್ಲ. ಇವು ಎರಡು ಇದ್ದರೆ ದಾನ ಧರ್ಮ ಮಾಡು ವದು ಮನಸ್ಸು ಇರುವದಿಲ್ಲ. ಇವು ಮೂರು ಗುಣಗಳು ಇರಬೇಕಾದರೆ ಅತಿ ದುರ್ಲಭ. ಇವೆಲ್ಲ ಮಾತುಗಳು ವಿಚಾರ ಮಾಡಿ ನಡಿಯಬೇಕು. ಇದೇ ನಿಜವಾದ ಸಮ್ಯಕ್ತ್ವ ಲಕ್ಷಣ.

# ಆಹಾರ ದಾನದ ಕ್ರಮ

ಆಹಾರ ದಾನದ ಕ್ರಮ ಹೇಳುತ್ತೇನೆ ಚಿತ್ತವಿಟ್ಟು ಕೇಳು. ಊರಲ್ಲಿ ಮುನಿ, ಐಲಕ, ಕ್ಷುಲ್ಲಕ, ಕ್ಷುಲ್ಲಕಿಯರ ( ಬಾಯಿಜೆಮ್ಮ ) ಯಿದ್ದಾಗ ಪಾತ್ರರು ಭಿಕ್ಷಕ್ಕೆ ಹೋಗುವ ಕ್ರಮ ಮೊದಲು ಮುನಿ ನಂತರ ಐಲಕ ಆ ನಂತರ ಕ್ಷುಲ್ಲಕ ಆ ನಂತರ ಬಾಯಿಜೆಮ್ಮ ಆ ನಂತರ ಬ್ರಹ್ಮಚಾರಿ ಈ ಪ್ರಕಾರ ವಿಚಾರದಿಂದಾ ಪಾತ್ರರನ್ನು ತಗೊಳ್ಳಬೇಕು. ಜರ ಮುನಿ ಭಿಕ್ಷಾ ಆದ ನಂತರ ಐಲಕ ಕ್ಷುಲ್ಲಕರ ಭಿಕ್ಷಾ ಆಗುತ್ತದೆ.

ಕ್ಷುಲ್ಲಕರದು ಆದ ನಂತರ ಮುನಿ ಭಿಕ್ಷಾ ಆಗುವದಿಲ್ಲಾ. ಕ್ಷುಲ್ಲಕರದು ಆದ ಮನೆಯಲ್ಲಿ ( ಬಾಯಿಜೆಮ್ಮ ) ಯಿವರದು ಆಗುತ್ತದೆ. ಇದರಲ್ಲಿ ಹೆಚ್ಚು ಕಡಿಮೆ ಆದರೆ ಕ್ಷುಲ್ಲಕರದು ಅಥವಾ ಮುನಿಗಳು ಉಪವಾಸ ಮಾಡುವ ಪ್ರಸಂಗ ಬರುತ್ತದೆ. ಕಾರಣಾ ಶುದ್ಧಿ ಮಾಡುವ ಮೊದಲು ನೀರು ಕೊಡುವಾಗ್ಗೆ ವಿಚಾರ ಮಾಡಿ ಪಾತ್ರರನ್ನು ಎಬ್ಬಿಸಬೇಕು. ಈ ವಿಷಯದಲ್ಲಿ ಹುಷಾರಿಯಿರಬೇಕು. ಮೈ ಮರಿಯಬೇಡ.

## ಜಗತ್ತಿನಲ್ಲಿ ಸ್ತ್ರೀಯರು ಹ್ಯಾಗಿರಬೇಕು

ಎನ್ನ ಸ್ತ್ರೀ ರತ್ನವೇ, ನಿನಗೆ ಇನ್ನೊಂದು ಮಹತ್ವದ ಮಾತು ಹೇಳುತ್ತೇನೆ ಕೇಳು. ಸ್ತ್ರೀಯರಲ್ಲಿ ಮುಖ್ಯ ಶೀಲ, ಸದ್ಗುಣ, ದಯಾ ದಾಕ್ಷಣ್ಯ, ಶಾಂತತೆ, ಕ್ಷಮಾ, ವಿನಯ, ಪತಿವ್ರತಾದಕ್ಷತೆ ( ಪ್ರೀತಿ ) ವಾತ್ಸಲ್ಯತೆ ಈ ಯಾವತ್ತು ಗುಣಗಳಿಂದಾ ಶೋಭಾಯಮಾನವಾಗಿ ಇರುವ ಸ್ತ್ರೀಯರೇ ಧನ್ಯರು. ಅಂಥವರಿಂದಾ ಜಗತ್ತಿನಲ್ಲಿ ಧರ್ಮ ವೃದ್ಧಿಯಾಗುತ್ತದೆ. ಸ್ತ್ರೀಯರಿಗೆ ಶಾಸ್ತ್ರದಲ್ಲಿ ಹದಿನಾಲ್ಕನೇ ರತ್ನ ವೆಂದು ಅಂದಿರುವರು. ಅಂಥಾ ಸ್ತ್ರೀಯರೇ ಆದಿನಾಥ ತೀರ್ಥಂಕರನ್ನು ಹಡದಿಲ್ಲವೇ? ಜಗತ್ಪತ್ತಿಗೆ ಸ್ತ್ರೀಯರೇ ಕಾರಣರಾಗಿರುತ್ತಾರೆ. ಆದ್ದರಿಂದ ನೀನು ಇದನ್ನೆಲ್ಲಾ ತಿಳಿದುಕೊಂಡು ಹಿಂದೆ ಬರೆದಂತೆ ನಡಿದುಕೊಳ್ಳಲಿಕ್ಕೆ ಪ್ರಯತ್ನ ಮಾಡು. ಅಂದರೆ ನಿನಗೆ ರತ್ನದಕಿಂತಲೂ ಹೆಚ್ಚು ಮಹತ್ವ ಬರುತ್ತದೆ. ಬಹಳ ಹೇಳುವದೇನು ಇದರಿಂದಾ ಸ್ವರ್ಗ ಮೋಕ್ಷಗಳು ಸಹ ಪ್ರಾಪ್ತವಾಗುತ್ತವೆ. ಈ ಮಾತನ್ನು ಮರಿಯಬೇಡ. ಸ್ತ್ರೀಯರ ಹಿಂದಿನ ಕಾಲದಲ್ಲಿಯ ಪ್ರಸಿದ್ಧತೆಯು ಈಗಲೂ ಇತಿಹಾ ಸದಲ್ಲಿ ಓದಬಹುದು. ಇದನ್ನೆಲ್ಲಾ ಓದಿ ಅದರಂತೆ ನಡೆದು ಕೊಂಡು ಸ್ತ್ರೀ ಪರ್ಯಾಯವನ್ನು ಬಿಟ್ಟು ಪುರುಷ ಪರ್ಯಾಯ ಧಾರಣ ಮಾಡಿ ಸ್ವರ್ಗ ಮೋಕ್ಷವನ್ನು ಪಡೆಯಬೇಕು.

# ರಾತ್ರಿಯಲ್ಲಿ ಅಡಗಿಯನ್ನು ಮಾಡಬೇಡ

**ಸುಗುಣಿಯೇ,**

ನಿನಗೆ ಇನ್ನೊಂದು ಮಹತ್ವದ ಮಾತು ಹೇಳುತ್ತೇನೆ ಕೇಳು. ರಾತ್ರಿಯಲ್ಲಿ ಸರ್ವಥಾ ಅಡಿಗಿ ಮಾಡಬೇಡ. ವಲಿಯಲ್ಲಿ ಬೆಂಕಿ ಸಹ ಹಾಕಬೇಡ. ಉಣ್ಣಲೂಬೇಡ. ಇದರ ವಿಷಯವಾಗಿ ಮುಂದೆ ವಿಸ್ತಾರ ವಾಗಿ ಹೊಸವೃತದ ಕಥೆಯು ಬರಿದಿರುತ್ತೇವೆ. ಅದನ್ನು ಚನ್ನಾಗಿ ಓದಿ ಅದರಂತೆ ನಡಿವಿರೆಂದು ನಂಬಿದ್ದೇವೆ.

**ಮುಂದಗಮನೇ,**

ನಿನಗೆ ಇನ್ನೊಂದು ಮಾತು ಹೇಳುತ್ತೇನೆ ಚಿತ್ತವಿಟ್ಟು ಕೇಳು. ಇನ್ನು ಸ್ವಲ್ಪ ದಿವಸಗಳಲ್ಲಿ ಕರ್ಮೋದಯದಿಂದ ಗರ್ಭಿಣಿಯಾದರೆ ಸ್ವಾಭಾವಿಕವಾಗಿ ಬೈಕಿ ಹತ್ತುವದುಂಟು. ಆ ಕಾಲಕ್ಕೆ ಬಹಳ ಎಚ್ಚ ರಿಕೆಯಿಂದ ಇರತಕ್ಕ ಎರಡು ಮಾತುಗಳು ಹೇಳುತ್ತೇನೆ ಕೇಳು. ಬೈಕಿ ಹತ್ತಿದಾಗ ಮಣ್ಣು ಮತ್ತು ಬೂದಿಯನ್ನು ತಿನ್ನಬೇಡ ಕೆಲವರು ಹೆಂಗ ಸರು ಮಣ್ಣು ಬೂದಿಯನ್ನು ತಿನ್ನುವದನ್ನು ನಾವು ಪ್ರತ್ಯಕ್ಷ ನೋಡಿ ದ್ದೇವೆ. ಅವರಂತೆ ನೀನು ಮಾಡಬೇಡ. ಯಾಕಂದರೇ ಅದು ನಿನಗೂ ಕೂಸಿಗೂ ಅಪಾಯುವುಂಟು. ಆದ್ದರಿಂದ ನೀನು ಬಿಟ್ಟು ಬಿಡಬೇಕು. ನೀನು ಗರ್ಭವತಿಯಾದಾಗ ದೇವಪೂಜಾ, ಗುರುಪೂಜಾ, ಶಾಸ್ತ್ರ ಪೂಜಾ ಶಲಾಕ ಪುರುಷರ ಕಥೆಗಳನ್ನು ಕೇಳುತ್ತಿರು. ನೀನು ಮಾಡುವ ಶುಭ ಭಾವನೆಗಳು ಸಹ ಕೂಸಿಗೆ ಸಂಸರ್ಗವಾಗಿ ಉತ್ತಮವಾಗಿ ಮುಕ್ತಿನಂಥ ಮಗನನ್ನು ಹಡೆಯುತ್ತಿ.

ಅಂಥ ಮಕ್ಕಳು ದೇಶ ಉದ್ಧಾರಕ್ಕೂ ಧರ್ಮ ಉದ್ಧಾರಕ್ಕೂ ಪಾತ್ರರಾಗುತ್ತಾರೆ. ಆದಿನಾಥ ತೀರ್ಥಂಕರ ತಾಯಿ ಮರುದೇವಿ ಅಜಿತನಾಥ ತೀರ್ಥಂಕರ ತಾಯಿ ವಿಜಯಾದೇವಿ ಇವರು ಎಂಥೆಂಥ ಮಕ್ಕಳನ್ನು ಹಡೆದಿರುವರು ನೋಡಿರಿ. ಈಗ ಪ್ರತ್ಯಕ್ಷ ಗಾಂಧಿ, ನೆಹರು

ಇವರ ತಾಯಿಗಳು ಎಂಥಾ ಮಕ್ಕಳನ್ನು ಈ ಕಾಲದಲ್ಲಿ ಹಡಿಯುಲಿಲ್ಲವೆ ಮಣ್ಣು ಬೂದಿ ತಿಂದು ೮-೧೦ ರೋಗಿಷ್ಟ ಮಕ್ಕಳನ್ನು ಹಡಿಯುವದಕ್ಕಿಂತ ರತ್ನದಂಥವಂದೆರಡೇ ಮಕ್ಕಳನ್ನು ಹಡೆಯುವದು ಉತ್ತಮು. ಈ ಮಾತು ಪೂರ್ವ ವಿಚಾರದಲ್ಲಿ ಇರಲಿ.

## ಸತಿಗೆ ಪತಿಯೇ ದೇವರು

**ಸುಮತೀ,**

ನಿನಗೆ ಪತಿಯೇ ದೇವರು. ಪತಿಯಿದ್ದ ಮನೆಯೇ ತೀರ್ಥ ಕ್ಷೇತ್ರ. ಪತಿಯೇ ದೇವರು. ಪತಿಯ ಪಾದೋದಕವೇ ಗಂಧೋದಕವು. ನಿನಗೆ ತೀರ್ಥಯಾತ್ರೆಯಾಗಲಿ, ಉಪವಾಸ ವೃತಗಳಾಗಲಿ, ಅನ್ಯ ದೇವರುಗಳಾಗಲಿ ಬೇಕಾಗಿಲ್ಲ. ಜಗತ್ತಿನಲ್ಲಿ ಹೆಣ್ಣು ಮಕ್ಕಳಿಗೆ ವೃತದೊಳಗೆ ಹೆಚ್ಚಿನದು ಯಾವದೆಂದರೆ ಪತಿವೃತವು. ಶಿವರಾತ್ರಿ | ನವರಾತ್ರಿ | ಗಳು ವೃತವಲ್ಲ. ಸೀತಾ, ತಾರಾ, ಮಂಡೋದರಿ, ದ್ರೌಪದಿ, ಅನುಸೂಯಾ, ಅಂಜನಿದೇವಿ, ಅನಂತಮತಿ, ನೀಲಾವತಿ ಮೊದಲಾದ ಅನೇಕ ನಾರೀ ಮಣಿಗಳು ಪತಿ ಭಕ್ತಿಯಿಂದ ನಡೆದು ಪತಿವೃತೆಯರೆನಿಸಿಕೊಂಡರು. ಅವರು ಅಳಿದು ಹೋಗಿ ಎಷ್ಟೋ ಶತಮಾನಗಳಾದರೂ ಅವರ ಕೀರ್ತಿ ಈಗಲೂ ಉಳಿದಿದೆ. ನೀನಾದರೂ ಅವರ ಹಾದಿಯನ್ನು ಹಿಡಿ. ನಿನ್ನ ಸೌಭಾಗ್ಯವು ನಿನ್ನ ಕೈ ಹಿಡಿದ ನಿನ್ನ ಗಂಡನಿಂದಲ್ಲದೆ ಅರಮನೆಯಾಗಲಿ, ಸಿರಿತನವಾಗಲಿ, ಪತಿಗಿಂತ ಹೆಚ್ಚೇ? ನಿನ್ನ ಪ್ರಾಣದರಸನಿಲ್ಲದೆ ಮನೆಯು ಹಾಳಲ್ಲವೇ? ನಿಜವಾದ ಸತಿಯು ಅವರನ್ನು ಅಗಲಿ ಒಂದು ಗಳಿಗೆಯೂ ದೂರ ಇರುವಳೇ? ಗಂಡನೇ ಪರದೈವ, ಗಂಡನೇ ಗುರುವು, ಗಂಡನು ಹುಚ್ಚನಿರಲಿ, ದಡ್ಡನಿರಲಿ, ಕುಂಟನಿರಲಿ, ಕುರುಡನಿರಲಿ. ಖಂಡಿತವಾಗಿಯೂ ನೀನು ಅವರನ್ನು ದೇವರೆಂದು ಭಾವಿಸಿ ನಡೆಯಬೇಕು. ಈ ಮಾತು ಮರೆಯದಿರು.

ನಳಿನಾಕ್ಷಿ, ನಿನಗೆ ಇನ್ನು ರೀತಿಯು ಮಾತು ಹೇಳುತ್ತೇನೆ. ಲಕ್ಷ ಇಟ್ಟು ಕೇಳು. ನಿನ್ನ ಗಂಡನು ದುರ್ವ್ಯಸನಿಯೂ ಕಪಟನು, ಮಿಥ್ಯಾ ದೃಷ್ಟಿ ಸಪ್ತವೆಸನಿ, ರಾತ್ರಿ ಊಟ ಮಾಡತಕ್ಕವನಿದ್ದರೆ ನೀನು ಮಾತ್ರ ರಾತ್ರಿ ಊಟ ಮಾಡಬೇಡ, ಹೊಸದ ಹೊತ್ತಿಗೆ ಮಾಡು. ಅದೇನು ಪಾಪ ಹತ್ತಲಾರದು. ಅವನು ಧರ್ಮ ಮಾತು ಮತ್ತೂ ನೀತಿ ಮಾತು ಹೇಳಿದರೆ ಮಾತ್ರ ನೀನು ಕೇಳತಕ್ಕದ್ದು. ನೀತಿ ನಡಾ ವಳಿ ಬಿಟ್ಟು ಅನೀತಿ ಮಾರ್ಗ ಹೇಳಿದರೆ ಮಾತ್ರ ಅವನ ಮಾತು ಮೀರಿ ದರೂ ಅಡ್ಡಿ ಇಲ್ಲಾ. ಇದೇನು ತಪ್ಪು ಆಗುವದಿಲ್ಲಾ. ನಿನ್ನ ನೀತಿ ನಡಾವಳಿಯನ್ನು ಮಾತ್ರ ಪ್ರಾಣ ಹೋದರೂ ಬಿಡಬೇಡ. ನೀನು ಅರ್ಧಾಂಗಿ ಇದ್ದು ನಿನ್ನನ್ನು ಅವನು ಕೇವಲ ಕೊಂಡ ತಂದ ದನ ಗಳಂತೆ ನಿನ್ನನ್ನು ನಡಿಸಿಕೊಂಡರೆ ಅವನು ಗಂಡನಲ್ಲಾ ಬೆಂಕಿ ಕೆಂಡ ವೆಂದು ತಿಳಿದು ದೂರ ಇದ್ದು ನಿನ್ನ ಆತ್ಮಕಲ್ಯಾಣ ಮಾಡಿಕೋ. ಉದಾಹರಣಾರ್ಥವಾಗಿ ಮುಂದೆ ನಾಗಶ್ರೀ ಕತೆಯನ್ನು ಹೇಳುತ್ತೇನೆ. ಓದಿಕೊಂಡು ಆ ನಾಗಶ್ರೀ ಯಾವ ಪ್ರಕಾರ ನಡೆದಳೋ ಅದರಂತೆ ನಡಿಯಲಿಕ್ಕೆ ಕಲಿ.

ಮತ್ತು ಶ್ರೇಣಿಕ ಹೆಂಡತಿಯಾದ ಚೇಳದೇವಿಯಂತೆ ಗಂಡನನ್ನು ಧರ್ಮ ಮಾರ್ಗಕ್ಕೆ ಹಚ್ಚುವದು ನಿನ್ನ ಕೈಯಲ್ಲಿದೆ. ಒಂದು ವೇಳೆ ಧರ್ಮ ಮಾರ್ಗ ಹಿಡಿಯದೆ ಅಡ್ಡ ದಾರಿ ಬಿದ್ದರೆ ನೀನು ಮಾತ್ರ ಧರ್ಮ ಮಾರ್ಗ ಬಿಡಬಾರದು. ಈ ಮಾತು ನೀನು ಎಚ್ಚರದಲ್ಲಿಟ್ಟು ಧರ್ಮ ಮಾರ್ಗವನ್ನು ಉಲ್ಲಂಘನೆ ಮಾಡದೆ ನಡಿಯಬೇಕು. ಇದೇ ಮನುಷ್ಯ ಧರ್ಮದ ಮಾರ್ಗವು. ಪತಿವ್ರತ ಸ್ತ್ರೀಯರ ಕರ್ತವ್ಯವು. ಇದನ್ನೆಲ್ಲಾ ತಿಳಿದು ನಡಕೊಳ್ಳಬೇಕು.

# ಕಥಾಸಾರಾಂಶ

ಭರತ ಕ್ಷೇತ್ರದಲ್ಲಿ ಚಿತ್ರಕೂಟನೆಂಬ ಪಟ್ಟಣವಿದ್ದಿತು. ಅದನ್ನು ಧಾರ್ಮಿಕನೂ, ವಿಚಾರಶೀಲನೂ, ಪರಾಕ್ರಮಿಯೂ, ದಯಾಳುವೂ ಆದ ಶ್ರೀಪತಿ ಎಂಬ ಮಹಾರಾಜನು ಆಳುತ್ತಿದ್ದನು. ಇಂತಹ ರಾಜನಿಗನುಗುಣವಾದ ಬುದ್ಧಿ ಚಾತುರ್ಯಗಳಿಂದ ಕೂಡಿದ ಶ್ರೀಪಾಲನೆಂಬ ಮಂತ್ರಿಯಿದ್ದನು. ಇವನಿಗೆ ಸಮ್ಯಗ್ದೃಷ್ಟಿಯೂ ವಿಚಾರಪರಳೂ, ಪತಿ ಭಕ್ತಿ ಪರಾಯಣಳೂ ಆದ ಧನವತಿ ಎಂಬ ಪತ್ನಿಯಿದ್ದಳು. ಈ ದಂಪತಿಗಳ ಧರ್ಮ ಪ್ರಭಾವನೆಯು ಕುರುಹು ಎಂಬಂತೆ ಪೂರ್ಣ ಚಂದ್ರನೋಪಾದಿಯಲ್ಲಿರುವ ಓರ್ವ ಪುತ್ರನಿದ್ದನು.

ಒಂದು ದಿವಸ ಸಾಯಂಕಾಲಕ್ಕೆ ಒಬ್ಬ ಅನಾಥಳಾದ ಹೊಲತಿಯು ಭಿಕ್ಷೆ ಬೇಡುತ್ತಾ ಧನವತಿಯ ಮನೆಯ ಬಾಗಿಲಿಗೆ ಬಂದಳು. ಆಗ ಸೂರ್ಯನು ಅಸ್ತಮಯನಾಗಿದ್ದದರಿಂದ ಆಟವಾಡಲು ಹೊರಗೆ ಹೋಗಿದ್ದ ಧನವತಿಯ ಪುತ್ರನು ಮನೆಗೆ ಬಂದು ತನ್ನ ತಾಯಿಯನ್ನು ಊಟಕ್ಕೆ ಇಡಲು ಕೇಳಿದನು. ಅದಕ್ಕೆ ಅವಳು:- " ಕತ್ತಲೆಯಾದ ನಂತರ ಊಟ ಮಾಡಬಾರದು. ಸಂಸಾರ ಸಾಗರದಲ್ಲಿ ಅಲೆದಾಡುತ್ತಾ ಅನೇಕ ಕಡೆ ಹುಟ್ಟಿ ಸತ್ತು ಬಹಳ ಕಷ್ಟಗಳನ್ನನುಭವಿಸಿ ಏನೋ ಕಿಂಚಿತ್ ಪೂರ್ವ ಪುಣ್ಯದ ಬಲದಿಂದ ಹೊಸ ವ್ರತವನ್ನು ಪಾಲನೆ ಮಾಡುವ ಜೀವದಯಾಪರವಾದ ಜೈನ ಮತದಲ್ಲಿ ಹುಟ್ಟಿರುವುದರಿಂದ ಆ ವ್ರತವನ್ನು ಬಿಡಬಾರದು. ಅಲ್ಲದೆ ಹಿಂಸಿಸುವುದು, ಸುಳ್ಳು ಹೇಳುವದು, ಕಳ್ಳತನ ಮಾಡುವುದು ಅಲ್ಲದೆ ಹೆಂಡ ಮಾಂಸ ಮತ್ತು ಜೇನತುಪ್ಪ ಇವುಗಳನ್ನು ತಿನ್ನುವುದು ಮುಂತಾದವುಗಳನ್ನು ಬಿಡಬೇಕು. ಇಂಥವುಗಳನ್ನು ಬಿಡದೆ ಇದ್ದಲ್ಲಿ ನೀಚ ಕುಲವು, ಬಂಜೆತನ, ಅಂಗಹೀನತೆ, ಕುಷ್ಟರೋಗ, ದಾರಿದ್ರ್ಯ ಮುಂತಾದ ಸಹಿಸಲಶಕ್ಯವಾದ ಕಷ್ಟಗಳನ್ನನುಭವಿಸಬೇಕಾಗುತ್ತದೆ. " ಎಂದು ಹೇಳುತ್ತಿದ್ದ ಬುದ್ಧಿ

ವಾದದ ಮಾತುಗಳನ್ನು ಬಾಗಿಲಿನಲ್ಲಿ ನಿಂತಿದ್ದ ಹೊಲತಿಯು ಕೇಳಿದ ವಳಾಗಿ ಭಿಕ್ಷೆ ನೀಡಲು ಹೊರಗೆ ಬಂದ ಧನವತಿಯನ್ನು ಕುರಿತು ತನಗೂ ಹೋಸ ವ್ರತದ ವಿಷಯುವನ್ನು ಹೇಳಬೇಕೆಂದು ಬೇಡಿ ಕೊಂಡಳು. ಅದಕ್ಕೆ ಧನವತಿಯು—

" ಹಗಲಿನಲ್ಲಿ ಸುಳಿದಾಡದೆ ಇರತಕ್ಕಂಥ ಸೂಕ್ಷ್ಮ ಜಂತುಗಳು ರಾತ್ರಿಯ ಕಾಲದಲ್ಲಿ ಹುಟ್ಟುವುದರಿಂದ ಅಂತಹ ಪ್ರಾಣಿಗಳಿಗೆ ಅಡಿಗೆ ಮಾಡುವುದರಿಂದ ತ್ರಾಸಾಗುವದಲ್ಲದೆ ಎಷ್ಟೋ ಪ್ರಾಣಿಗಳು ಸಾಯು-ವವೆಂದೂ ಕೆಲವು ಸಮಯುಗಳಲ್ಲಿ ರೋಗೋತ್ಪಾದಕ ಕ್ರಿಮಿಗಳು ರಾತ್ರಿ ತೆಗೆದುಕೊಳ್ಳುವ ಆಹಾರದೊಡನೆ ಹೊಟ್ಟೆಯಲ್ಲಿ ಸೇರಿ ಅನೇಕ ರೋಗಗಳಿಗೆ ಕಾರಣವಾಗುವುದರಿಂದಲೂ, ಸೂರ್ಯಾಸ್ತಮಯ ವಾದ ನಂತರ ಅನ್ನ, ಪಾನ, ಖಾದ್ಯ, ಲೇಹ್ಯ ಪಧಾರ್ಥಗಳನ್ನು ಮನ ವಚನ ಕಾಯುಗಳಿಂದ ತಿನ್ನುವುದನ್ನು ಬಿಡುವದೇ ಹೋಸ ವ್ರತ ವೆಂದೂ, ಈ ವ್ರತವನ್ನು ಪಾಲನೆ ಮಾಡಿದರೆ ದೇವಲೋಕವೂ, ಸ್ಫುರದ್ರೂಪವೂ, ಸಕಲ ಐಶ್ವರ್ಯಗಳೂ, ದೊಡ್ಡ ಮನೆತನವೂ, ದೇಶಾಧಿಪತಿತ್ವವೂ, ಲಭಿಸುವುದಲ್ಲದೆ ಜನನ ಮರಣ ರಹಿತವಾದ ಮೋಕ್ಷವು ಲಭಿಸುವುದೆಂದೂ ಹೇಳಿದ ಧನವತಿಯ ಮಾತಿನಲ್ಲಿ ನಂಬಿಗೆಯನ್ನಿಟ್ಟ ಆ ಚಾಂಡಾಲಿಯು ಅಂದಿನಿಂದ ತನಗೆ ಹೋಸ ವ್ರತವಿರಲೆಂದು ವ್ರತ ಧಾರಣ ಮಾಡಿ ತನ್ನ ಮನೆಯನ್ನು ಸೇರಿದಳು.

ಕೆಲವು ದಿವಸಗಳು ಕಳೆದ ನಂತರ ಒಂದು ದಿವಸ ರಾತ್ರಿ ಹೊಲತಿಯ ಗಂಡನಾದ ಭೀಮನು ಊಟ ಮಾಡುತ್ತಾ ಹೆಂಡತಿ ಯುನ್ನು ತನ್ನೊಡನೆ ಊಟ ಮಾಡಲು ಕರೆದನು. ಅದಕ್ಕೆ ಅವಳು ತಾನು ವ್ರತವನ್ನು ಪಾಲಿಸುತ್ತಿರುವದರಿಂದ ರಾತ್ರಿ ಊಟ ಮಾಡುವ ದಿಲ್ಲವೆಂದಳು. ತನ್ನ ಮಾತಿಗೆ ಪ್ರತ್ಯುತ್ತರವನ್ನು ಹೇಳಿದಳೆಂದು ಕುಪಿತನಾಗಿ ಬಲಾತ್ಕಾರ ಮಾಡಿದನು. ಅದಕ್ಕೂ ಅವಳು ಬಾರದೆ ಇರಲು ಅವಳ ಮುಂದೆಲೆಯನ್ನು ಹಿಡಿದೆಳೆದು ತನ್ನ ಸಮೀಪದಲ್ಲಿದ್ದ

ಮಚ್ಚು ( ಭರ್ಚಿ ) ಯಿಂದ ಅವಳನ್ನು ಇರಿದು ಕೊಂದನು. ಪಾಪಿ ಗೇತರ ಅಂತಃಕರುಣ !

ಈ ಕೃತ್ಯವು ಧನವತಿಗೆ ಗೊತ್ತಾಗದಿರಲಿಲ್ಲ. ಅವಳು ಚಾಂಡಾಲನ ಘೋರ ಕೃತ್ಯಕ್ಕೆ ಮನನೊಂದವಳಾಗಿ ಅವನನ್ನು ಕರೆಯಿಸಿ ಹೆಂಡತಿಯನ್ನು ಹಟಾತ್ತಾಗಿ ಕೊಂದದ್ದು ಒಳ್ಳೆಯದಲ್ಲವೆಂದೂ ಅದರಿಂದ ನಿನಗೆ ಕೇಡಾಗುವದೆಂದೂ ಇನ್ನು ಮೇಲಾದರೂ ಇಂತಹ ಪಾಪ ರಾಕ್ಷಸೀ ಕೃತ್ಯವನ್ನು ಮಾಡಬಾರದೆಂದೂ ಚನ್ನಾಗಿ ತಿಳಿ ಹೇಳಲು ಅವನು ತನ್ನ ಮನೆಗೆ ಬಂದು ತನ್ನ ಪಾಪಕೃತ್ಯಕ್ಕೆ ಮರುಗಿದವನಾಗಿ ಅನ್ಯಾಯವಾಗಿ ನನ್ನ ಹೆಂಡತಿಯನ್ನು ಕೊಂದೆನಲ್ಲಾ ಎಂಬ ಸಂತಾಪದಿಂದ ಆತ್ಮಹತ್ಯ ಮಾಡಿಕೊಂಡನು.

## ರಾಕ್ಷಸೀ ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವಾಗದೇ ಬಿಡಲಿಕ್ಕಿಲ್ಲವೇ ?

ಇತ್ತ ಧನವತಿಯು ನವಮಾಸ ತುಂಬಿ ಧರ್ಮದ ಸ್ವರೂಪವೇ ಒಂದು ರೂಪವನ್ನು ತಾಳಿಕೊಂಡು ಬಂದಿದೆಯೋ ಎನ್ನುವಂತೆ ಷೋಡಶ ಕಳೆಗಳಿಂದ ತುಂಬಿದ ರೇಖ ಲಾವಣ್ಯಗಳುಳ್ಳ ಸ್ತ್ರೀ ಶಿಸುವನ್ನು ಪ್ರುಸವಿಸಿದಳು. ಆ ಶಿಸುವಿಗೆ ನಾಗಸ್ತ್ರೀ ಎಂದು ನಾಮಕರಣ ಮಾಡಿದರು. ನಾಗಸ್ತ್ರೀಯು ತನ್ನ ವಿದ್ಯೆ ಬುದ್ಧಿ ಚಾತುರ್ಯಗಳಿಂದ ಸರ್ವ ಜನ ಮನೋರಂಜನೆಯಾಗಿ ವೃದ್ಧಿ ಚಂದ್ರನಂತೆ ದಿನೇ ದಿನೇ ಬೆಳೆಯುತ್ತಾ ಬಂದಳು. ಇವಳು ಒಂದಾನೊಂದು ದಿವಸ ತನ್ನ ಮನೆಯ ಮುಂಭಾಗದಲ್ಲಿ ಹಾದು ಹೋಗುತ್ತಿದ್ದ ನಾಯಿಯನ್ನು ನೋಡಿ ಅದು ತನಗೆ ಬೇಕೆಂದು ಹೇಳಿ ಅದನ್ನು ಹಿಡಿತರಿಸಿ ಪ್ರೀತಿಯಿಂದ ಸಾಕುತ್ತಿದ್ದಳು. ಆ ನಾಯಿಯನ್ನು ನಾಗಸ್ತ್ರೀಯು, ನಾಗಸ್ತ್ರೀಯನ್ನು ನಾಯಿಯೂ ಪ್ರೀತಿಸುತ್ತಿದ್ದುದನ್ನು ಕಂಡವರೆಲ್ಲಾ ಏನೋ ಪೂರ್ವಜನ್ಮ ಸಂಸ್ಕಾರವಿರಬೇಕೆಂದು ಅನ್ನುತ್ತಿದ್ದರು.

ವಾಚಕ ಮಹಾಶಯರೇ! ನೀವು ಪೂರ್ವ ಜನ್ಮ ಸಂಸ್ಕಾರ ವಿರಬಹುದೆಂದು ನಂಬುವಿರಾ ? ನಂಬುವಿರಾದರೆ ನಿಮ್ಮ ಊಹೆಯು ನಿಜವಾದುದೆಂದು ತಿಳಿದು ನಿಮ್ಮ ಮನೋಭಾವನೆಯನ್ನು ಮುಂದಕ್ಕೆ ಬಿಡದೆ ಆ ನಾಗಸ್ತ್ರೀಯೇ ಚಾಂಡಾಲಿ ಎಂದೂ, ಆ ಶ್ವಾನವೇ ಚಾಂಡಾಲಿಯ ಪತಿಯಾದ ಭೀಮನೆಂದೂ, ಹೇಳಲು ತಮಗೆ ಆಶ್ಚರ್ಯವಾಗಲಿಕ್ಕಿಲ್ಲವೆಂದು ತಿಳಿಯುತ್ತೇನೆ.

ಅದೇ ನಗರದಲ್ಲಿ **ಶ್ರೀಧರನೆಂಬ** ವರ್ತಕಶಿರೋಮಣಿಯು

" ದೇವಪೂಜಾ ಗುರುಪಾಸ್ತಿ ಸ್ವಾಧ್ಯಾಯ ಸಂಯಮಸ್ತಪಃ "
|| ದಾನಂ ಚೇತಿ ಗೃಹಸ್ಥಾನಾಂಷಟ್ಕರ್ಮಾಣಿ ದಿನೇ ದಿನೇ ||

ಎಂದು ಹೇಳುತ್ತಿರುವ ಆಚಾರ್ಯರ ವಚನಾನುಸಾರ ಷಟ್ಕ-ರ್ಮಗಳನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಇವನು ದ್ರವ್ಯ ಸಂಪಾದನೆಗೋಸ್ಕರ ಬೇರೆ ಊರಿಗೆ ಹೋಗಲುದ್ಯುಕ್ತನಾಗಿ ತಾನು ಪುನಃ ಊರಿಗೆ ಬರುವವರೆಗೂ ಯಾವ ತರಹದ ಕುಂದು ಕೊರತೆಗಳಿಲ್ಲದೆ ದಾನ ಧರ್ಮಗಳನ್ನು ಮಾಡಬೇಕೆಂದು ತನ್ನ ಪತ್ನಿಗೆ ಹೇಳಿ ಸಾಕಷ್ಟು ಹಣವನ್ನು ಕೊಟ್ಟು ಪರದೇಶ ಗಮನ ಮಾಡಿದನು.

ಇತ್ತ ಲೋಭಿಯಾದ ಇವನ ಪತ್ನಿಯು ಪತಿಯ ಮಾತಿನಂತೆ ನಡೆಯದೆ ದಾನ ಧರ್ಮಗಳನ್ನು ಬಿಟ್ಟು ಬಿಟ್ಟಳು. ಕೊಟ್ಟ ಧನವನ್ನು ತವರ ಮನೆಗೆ ಕೊಟ್ಟು ಕಳಿಸುತ್ತಿದ್ದಳು.

ಅತ್ತ ಶ್ರೀಧರನು ತನ್ನ ವ್ಯಾಪಾರವನ್ನು ತೀರಿಸಿಕೊಂಡು ಊರ ಹೆಬ್ಬಾಗಿಲಿಗೆ ಬಂದನು. ತನ್ನ ಹೆಂಡತಿಗೆ ತಾನು ಬಂದ ವಿಷಯ ವನ್ನು ಹೇಳಿ ಕಳುಹಿಸಲು ಹೆಂಡತಿಯು ತನ್ನ ಗಂಡನು ವ್ಯಾಪಾರ ಮಾಡಿ ಬೇಕಾದಷ್ಟು ಹಣವನ್ನು ತಂದಿರುವುದನ್ನು ತಿಳಿದು ಅವನಿಗೆ ಆದರ ಸತ್ಕಾರ ಮಾಡಲು ಅಣಿ ಮಾಡಿ ತನ್ನ ಪತಿಯು ಮನೆಗೆ

ಬಂದ ನಂತರ ವಿನಯದಿಂದ ಉಪಚರಿಸಲು, ಇವಳ ಉಪಚಾರ
ವಾವುದೂ ಇವನ ಮನಸ್ಸಿಗೆ ಬಾರದೇ ತಿರಸ್ಕರಿಸಿದನು.

ಹೀಗೆ ತಿರಸ್ಕರಿಸಲು ತನ್ನ ಇಚ್ಛೆಯಂತೆ ದಾನ ಧರ್ಮಗಳನ್ನು
ಮಾಡದೆ ಇದ್ದದ್ದೇ ಕಾರಣವೆಂದು ಮತ್ತೆ ಹೇಳಬೇಕಾಗಿಲ್ಲ.

ಪತ್ನಿಗೆ ತನ್ನ ಪತಿಯ ತಿರಸ್ಕಾರವು ಸಹಿಸಲಸದಳವಾಯಿತು.
ಆಗ ಅವಳು ತನ್ನ ತವರೂರಿಗೆ ಹೋಗಬೇಕೆಂದು ಕೇಳಲು ಶ್ರೀಧರನು
ಅವಳನ್ನು ಊರಿಗೆ ಕಳುಹಿಸಿ ಸಂಸಾರದಲ್ಲಿ ಸುಖವಿಲ್ಲವೆಂದು ತಿಳಿದು
ಸನ್ಯಾಸ ವ್ರತವನ್ನು ಸ್ವೀಕರಿಸಬೇಕೆಂದು ಜಿನ ಚೈತ್ಯಾಲಯವನ್ನು
ಸೇರಿ ಮೂರು ಲೋಕಗಳಿಗೊಡೆಯನೂ, ಜಗದುದ್ಧಾರಕನೂ, ಆದ
ಶ್ರೀ ಭಗವಂತನ ದರ್ಶನವನ್ನು ತೆಗೆದುಕೊಂಡು ಅಷ್ಟ ವಿಧಾರ್ಚನೆ
ಗಳಿಂದ ಪೂಜಿಸಿ ಸಮೀಪದಲ್ಲಿದ್ದ ಸ್ಯಾದ್ವಾದ ಪಾರಂಗತರಾದ
**ಶ್ರೀ ಬೋಧಸಾಗರ ಮುನಿ**ಗಳ ಹತ್ತಿರಕ್ಕೆ ಹೋಗಿ ಅವರಿಗೆ
ನಮಸ್ಕರಿಸಿ ಅಹಿಂಸಾತತ್ವಮೂಲವಾದ ಧರ್ಮೋಪದೇಶವನ್ನು ಕೇಳಿ
ತನ್ನ ಮನದ ಅಭಿಪ್ರಾಯವನ್ನು ಅರಿಕೆ ಮಾಡಿಕೊಂಡನು. ವಿದ್ಯಾ-
ವಿನಯಸಂಪನ್ನನೂ, ಮನ್ಮಥನನ್ನು ಜರಿಯುವ ರೂಪ-ಲಾವಣ್ಯ
ಗಳುಳ್ಳವನೂ ತಾರುಣ್ಯವನ್ನೂ ಧನವನ್ನೂ ಹೊಂದಿರುವನಾಗಿ ಸತ್ಪು-
ರುಷನಾಗಿರುವದರಿಂದ ಇವನಿಂದ ಎಷ್ಟೋ ಧರ್ಮ ಕಾರ್ಯಗಳು
ನಡೆಯಬೇಕಾಗಿರುವದರಿಂದ ಶ್ರಾವಕ ಧರ್ಮದಲ್ಲಿಯೇ ಕೆಲವು ದಿವಸ
ಗಳಿರಬೇಕೆಂದು ತಿಳಿದು ಅವನಿಗೆ ಮುನಿ ದೀಕ್ಷೆಯನ್ನು ಕೊಡಲಿಲ್ಲ.

ಇದನ್ನು ಅಲ್ಲಿ ನೆರೆದಿದ್ದ ಸಮಸ್ತ ಶ್ರಾವಕ ಮಂಡಳಿಯವರು
ನಡೆದ ವೃತ್ತಾಂತವನ್ನು ತಿಳಿದವರಾಗಿ ಅನುರೂಪಳೂ ಧಾರ್ಮಿಕಳೂ
ಸಮ್ಯಕ್ತ್ವವತಿಯೂ ಆದ ಕನ್ಯೆಯನ್ನು ತಂದು ಲಗ್ನ ಮಾಡುವೆ
ವೆಂದು ಶಪಥ ಮಾಡಿ ಶ್ರೀಧರನನ್ನು ಸಂತೈಸತ್ತಿರುವಲ್ಲಿ ನವಯೌವನ
ವತಿಯಾದ ಕನ್ಯೆಯು ತನ್ನ ತಾಯಿಯೊಡಗೂಡಿ ಸಮಸ್ತ ಪರಿವಾರ
ದೊಂದಿಗೆ ದೇವಸ್ಥಾನಕ್ಕೆ ಬಂದು ಶ್ರೀ ಜಿನೇಶ್ವರನನ್ನು ಜಲ, ಗಂಧ,

ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲಾರ್ಘ್ಯಗಳಿಂದ ಪೂಜಿಸಿ ದಿನ ವ್ರತವನ್ನು ಸ್ವೀಕರಿಸಿ ಮುನಿಗಳ ಸಮೀಪಕ್ಕೆ ಬಂದು ಸಂಸಾರ ಭ್ರಮಣರೂಪವನ್ನು ಕಳೆದುಕೊಳ್ಳಲು ಮಾಡಬೇಕಾದ ಕರ್ತವ್ಯವನ್ನು ತಿಳಿದು, ಶಾಸ್ತ್ರವನ್ನು ಕೇಳಿ, ಗುರುಗಳಿಗೆ ವಂದಿಸಿ ಹೊರಡುವ ಸಮ-ಯದಲ್ಲಿ ಆ ಸ್ತ್ರೀಯ ಚಂಚಲ ದೃಷ್ಟಿಯು ಮನಸಿಜನೋಪಾದಿ ಯಲ್ಲಿದ್ದ ಶ್ರೀಧರನ ಮೇಲೆ ಬಿದ್ದಿತು. ಶ್ರೀಧರನ ಕೇಕರದೃಷ್ಟಿಯು ಈ ಕನ್ಯೆಯ ಮೇಲೆ ಬಿದ್ದು ಮನಸೋತವನಾಗಿ ಅವಳನ್ನೇ ವಿವಾಹವಾಗ ಬೇಕೆಂಬ ಮನಸ್ಸಿನಿಂದ ಮನೆಯನ್ನು ಸೇರಿದನು.

ವಾಚಕ ಮಹಾಶಯರೇ ಈ ಕನ್ಯೆಯು ಯಾರೆಂದು ಊಹಿಸ ಬಲ್ಲಿರಾ ? ಇವಳೇ ಧನವತಿಯ ಸುಕುಮಾರಿಯಾದ ನಾಗಸ್ತ್ರೀ. ಇವಳು ತನ್ನ ತಾಯಿಯೊಡಗೂಡಿ ದೇವಸ್ಥಾನಕ್ಕೆ ಬಂದ ಸಮಯ ದಲ್ಲಿ ಮೇಲೆ ನಡೆದ ವಿಷಯಗಳು ನಡೆದುವು.

ಇತ್ತ ನಾಗಸ್ತ್ರೀಯು ಶ್ರೀಧರನನ್ನೇ ವಿವಾಹವಾಗಬೇಕೆಂದು ಮನಸ್ಸು ಮಾಡಿದಳು. ಈ ವಿಷಯವು ಧನವತಿಗೂ, ಶ್ರೀಪತಿಗೂ ತಿಳಿದದ್ದರಿಂದಲೂ ಶ್ರೀಧರನಿಗೆ ನಾಗಸ್ತ್ರೀಯ ಹೊರತು ಬೇರೆ ಅನು ರೂಪಳಾದ ಕನ್ಯೆ ಇಲ್ಲವೆಂದು ಅವನ ವಂಶಜರು ಚಿಂತಿಸುತ್ತಿರುವಲ್ಲಿ ನಾಗಸ್ತ್ರೀಯ ಮನೋಭಿಲಾಷೆಯು ಗೊತ್ತಾದ್ದರಿಂದಲೂ ಶುಭ ಮುಹೂರ್ತದಲ್ಲಿ ನಾಗಸ್ತ್ರೀಯ ಮತ್ತು ಶ್ರೀಧರನ ವಿವಾಹವು ಬಹು ವಿಜೃಂಭಣೆಯಿಂದ ನಡೆಯಿತೆಂದು ಹೇಳಿದರೆ ಅತಿಶಯೋಕ್ತಿಯಾಗ ಲಾರದು.

ಶ್ರೀಧರನು ಮತ್ತೊಂದು ಲಗ್ನವಾದದ್ದನ್ನು ಮೊದಲನೆ ಪತ್ನಿಯು ತಿಳಿದವಳಾಗಿ ಮನನೊಂದು ತನ್ನ ತವರೂರಿನಿಂದ ಪತಿಯ ಮನೆಗೆ ಬಂದಳು. ಆಗ ಶ್ರೀಧರನು ತನ್ನ ಮಾತಿನ ಪ್ರಕಾರ ನಡೆಯದ ಕಾರಣ ಅವಳ ದರ್ಶನವೇ ತನಗೆ ಬೇಡವೆಂದು ಹೇಳಿದನು.

ಆದರೆ ವಿನಯಸಂಪನ್ನಳಾದ ನಾಗಶ್ರೀಯು ತನ್ನ ಅಕ್ಕನನ್ನು ಸವತಿ ಮತ್ಸರದಿಂದ ಕಾಣದೆ ಅವಳಿಗೂ ಸಹ ಒಂದು ಮನೆಯನ್ನು ಕೊಟ್ಟು ತನ್ನ ಸಮೀಪದಲ್ಲೆ ಇಟ್ಟುಕೊಳ್ಳಬೇಕೆಂದು ತನ್ನ ಪತಿಯನ್ನು ಬೇಡಿ ಕೊಂಡಳು. ಇವಳ ಮಾತಿನಂತೆ ಶ್ರೀಧರನು ತನ್ನ ಮೊದಲನೆ ಹೆಂಡ-ತಿಗೆ ಮನೆಯನ್ನು ಕೊಟ್ಟನು. ಅವಳು ಪ್ರತಿದಿವಸವೂ ನಾಗಶ್ರೀಯ ಮನೆಗೆ ಬರುತ್ತಲೂ ಕೆಲಸ ಕಾರ್ಯಗಳನ್ನು ಮಾಡುತ್ತ ತಂಗಿಯೊ ಡನೆ ಪ್ರೇಮದಿಂದ್ದಳು.

ಕೆಲವು ದಿವಸಗಳ ನಂತರ ಶ್ರೀಧರನು ಯಥಾ ಪ್ರಕಾರ ವ್ಯಾಪಾರಕ್ಕಾಗಿ ಹಡಗವನ್ನು ಏರಿ ಪರದೇಶಗಮನ ಮಾಡಿದನು. ಇತ್ತ ನಾಗಶ್ರೀಯು ಪತಿಯ ಆಜ್ಞೆಯನ್ನು ಎಳ್ಳಷ್ಟೂ ಮೀರದೆ ಅವ ನಿದ್ದ ಕಾಲದಲ್ಲಿ ಮಾಡುವುದಕ್ಕಿಂತಲೂ ಇಮ್ಮಡಿಯಾಗಿ ದಾನ ಧರ್ಮ ಪರೋಪಕಾರಗಳನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದಳು. ಒಂದು ದಿವಸ ಇವಳ ಮನೆಗೆ ಶ್ರೀ ಶೃತಸಾಗರರೆಂಬ ಮುನಿಗಳು ೫೦೦ ಜನ ಶಿಷ್ಯರೊಂದಿಗೆ ಭಿಕ್ಷಕ್ಕೆ ಬಂದರು. ಆಗ ನಾಗಶ್ರೀಯು ಸಂತೋಷಭರಿತಳಾಗಿ ಧರ್ಮವಾತ್ಸಲ್ಯದಿಂದ ಬಂದವರಿಗೆಲ್ಲಾ ಆಹಾರದಾನ ಮಾಡಿ ಪುಣ್ಯ ಭಾಗಿಯಾದಳು. ಈ ಸಂಭ್ರಮದಲ್ಲಿ ತನ್ನ ಅಕ್ಕನಿಗೆ ಹೇಳಿ ಕಳುಹಿಸುವದನ್ನು ಮರೆತಳು. ಇವಳ ಇಂಗಿತ ವನ್ನರಿತ ನಾಯಿಯು ತೀವ್ರದಲ್ಲಿ ಹೋಗಿ ಇವಳ ಅಕ್ಕನ ಮನೆಯ ಮುಂದೆ ಬೊಗಳಿತು. ಇದನ್ನು ಕಂಡು ಸವತಿ ಮಾತ್ಸರ್ಯದಿಂದ ಕೂಡಿದ ಶ್ರೀಧರನ ಪಟ್ಟ ಮಹಿಷಿಯು ತನ್ನ ಬಾಳು ನಾಯಿಯಿಂದ ಕರೆಯಿಸಿಕೊಳ್ಳುವಂತಾಯಿತೆಂಬ ಸಂತಾಪದಿಂದ ಕ್ರೋಧವಶಳಾಗಿ ತಾನು ಒಲೆಯ ಮೇಲೆ ಕರಿಯಲು ಇಟ್ಟಿದ್ದ ಕಾದೆಣ್ಣೆಯನ್ನು ತಂದು ಆ ನಾಯಿಯ ಮೇಲೆ ಸುರಿದಳು. ಆ ಎಣ್ಣೆಯು ಬಹಳ ಕಾದಿದ್ದುದ ರಿಂದ ನಾಯಿಯ ಮೈಯಲ್ಲಾ ಸುಟ್ಟಿತು. ನಾಯಿಯು ಅರಚುತ್ತಾ ಕಂಠಗತ ಪ್ರಾಣದಿಂದ ತನ್ನ ಒಡತಿಯ ಮನೆಯ ಬಾಗಿಲಿಗೆ ಹೋಗಿ

ಬಿದ್ದಿತು. ಇದನ್ನು ಕಂಡು ಆ ನಾಗಸ್ತ್ರೀಯು ತನ್ನ ಅಕ್ಕನ ಕೃತ್ಯಕ್ಕೆ ಮನ ಕರಗಿದವಳಾಗಿ ಆ ಶುನಕಕ್ಕೆ ಅಂತ್ಯ ಕಾಲದಲ್ಲಿ ಶೈತ್ಯೋಪಚಾರವನ್ನು ಮಾಡಲು ಕಾಲವಿಲ್ಲವೆಂದು ತಿಳಿದು ಆ ನಾಯಿಯ ಕಿವಿಯಲ್ಲಿ ಪಂಚ ನಮುಸ್ಕಾರವನ್ನು ಉಪದೇಶ ಮಾಡಿದಳು. ಆ ನಾಯಿಯು ಒಂದೇ ಮನಸ್ಸಿನಿಂದ ಪಂಚನಮುಸ್ಕಾರವನ್ನು ಕೇಳುತ್ತಾ ದೇಹವನ್ನು ಬಿಟ್ಟಿತು.

ಇತ್ತ ಶ್ರೀಧರನು ತನ್ನ ವ್ಯಾಪಾರವನ್ನು ತೀರಿಸಿಕೊಂಡು ಬೇಕಾದಷ್ಟು ಹಣದೊಂದಿಗೆ ತನ್ನ ಊರಿಗೆ ಹಡಗವನ್ನೇರಿ ಬರುತ್ತಿರಲು ದಾರಿಯಲ್ಲಿ ಅಕಸ್ಮಾತವಾಗಿ ಒದಗಿದ ಮಳೆ, ಗುಡುಗು, ಮಿಂಚು, ಬಿರುಗಾಳಿಗೆ ಸಿಕ್ಕು ಸಮುದ್ರದ ಅಲೆಗಳ ಹೊಡತಕ್ಕೆ ತನ್ನ ಹಡಗು ಸಿಕ್ಕು ಅಲ್ಲೋಲ ಕಲ್ಲೋಲವಾಗುವದೆಂದು ತಿಳಿದು ಇಂತಹ ಸಂಕಟ ಸಮಯದಲ್ಲಿ ಶ್ರೀ ಅರ್ಹತ್ಪರಮೇಶ್ವರನ ಹೊರತು ತನಗೆ ರಕ್ಷಕರು ಬೇರೆಯಿಲ್ಲವೆಂದು ತಿಳಿದು ಪಂಚನಮುಸ್ಕಾರವನ್ನು ಜಪಿಸಹತ್ತಿದನು. ಇವನ ಭಕ್ತಿಯ ವಿಷಯವು ದೇವಲೋಕದೊಳಗಿನ ದೇವನ ಆಸನವು ಕಂಪಾಯಮಾನವಾಯಿತು. ಅದರಿಂದಾ ಆ ದೇವನು ತತಕ್ಷಣವೇ ದೇವನು ಆ ಸ್ಥಳಕ್ಕೆ ಬಂದು ಶ್ರೀಧರನಿಗೆ ಉಂಟಾದ ಸಂಕಟವನ್ನು ತಪ್ಪಿಸಿ ಅವನಿಗೆ ನಮುಸ್ಕರಿಸಿ ಇದೊಂದು ರತ್ನಾಹಾರವನ್ನು ನಾಗ ಸ್ತ್ರೀಗೆ ಕೊಡಬೇಕೆಂದು ಬೇಡಿಕೊಂಡನು. ಆಗ ಶ್ರೀಧರನು ಚಕಿತ ನಾಗಿ " ನೀನು ಯಾರು ? ಈ ರತ್ನಾಹಾರವನ್ನು ನಾಗಸ್ತ್ರೀಗೇಕೆ ಕೊಡಬೇಕು " ? ಎಂಬುದಾಗಿ ಕೇಳಿದನು. ಅದಕ್ಕೆ ದೇವನು " ನಿನ್ನ ಮನೆಯ ಬಾಗಿಲಲ್ಲಿ ಬಿದ್ದಿದ್ದ ನಾಯಿಯೇ ನಾನೆಂದೂ, ಪಂಚ ನಮು ಸ್ಕಾರದ ಮಹತ್ವದಿಂದ ಈ ಜನ್ಮವು ನನಗೆ ಬಂದಿತೆಂದೂ, ನಿನ್ನ ಹಿರಿಯ ಹೆಂಡತಿಯ ಕೃತಿಯಿಂದ ನಿನಗೆ ವಿಪತ್ತು ಬಂದಿತೆಂದೂ ಆ ವಿಪತ್ತನ್ನು ದೂರ ಮಾಡುವದು ನಿನ್ನ ಕಿರಿಯ ಹೆಂಡತಿಯ ಧರ್ಮ ಪ್ರಭಾವನೆ ಯಿಂದ ನಾಯಿಯ ಜನ್ಮವನ್ನು ಅಳಿದು ದೇವ ಜನ್ಮವನ್ನು ತಾಳಿದ ನನ್ನ ಕರ್ತವ್ಯವಾಗಿದ್ದುದರಿಂದ ಬಂದೆನು. " ಎಂದು ಹೇಳಿ ರತ್ನಹಾರ

ವನ್ನು ಕೊಟ್ಟನು. ಈ ವೃತ್ತಾಂತವನ್ನೆಲ್ಲ ಶ್ರೀಧರನು ಕೇಳಿ ನಾಗ
ಸ್ತ್ರೀಯ ಅಸ್ಖಲಿತವಾದ ಧರ್ಮಗುಣಾತಿಶಯಗಳಿಗೆ ಮೆಚ್ಚಿ ಸಂತೋಷ
ಭರಿತನಾಗಿ ದೇವನಿಂದ ಕೊಡಲ್ಪಟ್ಟ ರತ್ನಾಹಾರವನ್ನು ತೆಗೆದು
ಕೊಂಡು ಸುರಕ್ಷಿತ ತನ್ನ ಊರನ್ನು ತಲ್ಪಿದನು. ಇವನು ಊರಿಗೆ
ಬಂದ ನಂತರ ಅತಿಥಿ ಸತ್ಕಾರಗಳು ನಡೆದುವು. ಶ್ರೀಧರನ ಸಂತೋಷ
ವನ್ನು ವರ್ಣಿಸಲು ಯಾರಿಂದ ಸಾಧ್ಯ ?

ಶ್ರೀಧರನು ತಾನು ವ್ಯಾಪಾರಕ್ಕಾಗಿ ಹೋಗಿ ಬಹು ಅಮೂಲ್ಯ
ವಾದ ವಜ್ರ-ವೈಢೂರ್ಯಗಳನ್ನು ತಂದದ್ದರಿಂದ ಅವುಗಳನ್ನು ರಾಜ
ನಿಗೆ ಕಾಣಿಕೆಯಾಗಿ ಒಪ್ಪಿಸಲು ಹೋದನು. ರಾಜನು ಇವನನ್ನು
ಮನ್ನಿಸಿ ಇವನಿಂದ ಬಂದ ರಾಜಮರ್ಯಾದೆಗಳನ್ನು ಸ್ವೀಕರಿಸಿ
ಇವನಿಗೆ ಉಡುಗರೆಗಳನ್ನು ಕೊಟ್ಟು ಕಳುಹಿಸಿದನು. ಶ್ರೀಧರನು ತನ್ನ
ಮನೆಗೆ ಬಂದು ನಡೆದ ವೃತ್ತಾಂತವನ್ನೆಲ್ಲ ವನಿತಾ ಶಿರೋಮಣಿ
ಯಾದ ನಾಗಸ್ತ್ರೀಗೆ ಹೇಳಿ ದೇವನಿಂದ ಕೊಡಲ್ಪಟ್ಟ ರತ್ನಾಹಾರ
ವನ್ನು ಕೊಟ್ಟನು. (ನಮ್ಮಲ್ಲಿ ರಾಜರು ಧರಿಸತಕ್ಕ ರತ್ನಗಳಿಗೆ ಬೆಲೆ
ಕಟ್ಟುವವರಿರುವದಿಲ್ಲ. ಹಾಗಾದರೆ ದೇವನಿಂದ ಕೊಡಲ್ಪಟ್ಟ ರತ್ನಾ
ಹಾರಕ್ಕೆ ಬೆಲೆ ಕಟ್ಟುವವರಾರು ? ಸಾಮಾನ್ಯ ರತ್ನಾಹಾರದ ಪ್ರಭೆ
ಯನ್ನೇ ವರ್ಣಿಸಲಸದಳವಾಗಿರುವಲ್ಲಿ ದೇವಲೋಕದ ರತ್ನಾಹಾರದ
ಪ್ರಭೆಯನ್ನು ವರ್ಣಿಸಲಾರಿಂದ ಸಾಧ್ಯ ? ಒಟ್ಟಿನ ಮೇಲೆ ಬಹು
ತೇಜಃಪುಂಜವಾಗಿ ಪ್ರಕಾಶಿಸುತ್ತಿದ್ದಿತೆಂದು ಹೇಳುವವು.)

ಈ ಉಪಮಾತೀತವಾದ ರತ್ನಾಹಾರದ ಪ್ರಶಂಸೆಯು ಊರ
ಲ್ಲೆಲ್ಲಾ ಹಬ್ಬಿತಲ್ಲದೆ ರಾಜನ ಪಟ್ಟ ಮಹಿಷಿಗೂ ತಿಳಿಯಿತು. ಎಷ್ಟು
ಒಡವೆಗಳಿದ್ದರೂ ಇನ್ನೂ ಪಡೆಯಬೇಕೆಂಬ ಅಭಿಲಾಷೆಯು ಸ್ತ್ರೀಯರಿ
ಗಿರುವದು. ಯಾರಿಗಿರುವುದಿಲ್ಲ ! ಅದರಂತೆ ರಾಣಿಯು ನಾಗಸ್ತ್ರೀಯ
ರತ್ನಾಹಾಗವನ್ನೇ ಧರಿಸಬೇಕೆಂಬ ಅಭಿಲಾಷೆಯಿಂದ ತನ್ನ ಪತಿಗೆ ತಿಳು

ಹಿದಳು. ರಾಜನು ತನ್ನ ವನಿತೆಯ ಮಾತಿನಂತೆ ಶ್ರೀಧರನನ್ನು ಕರೆಯಿಸಿ ಆ ರತ್ನಹಾರವನ್ನು ತಂದೊಪ್ಪಿಸಬೇಕೆಂದು ಹೇಳಲು ರಾಜಾಜ್ಞೆಯನ್ನು ಶಿರಸಾವಹಿಸಿ ಅದನ್ನು ತಂದೊಪ್ಪಿಸಿದನು. ರಾಜನು ಸಂತೋಷದಿಂದ ತನ್ನ ಭಾರ್ಯೆಯ ಕಂಠಕ್ಕೆ ಹಾಕಲು ಅದು ಸರ್ಪವಾಗಿ ಪರಿಣಮಿಸಿತು. " ದೈವೇಚ್ಛೆಯನ್ನು ಬಲ್ಲವರಾರು !

ರಾಜನು ಇದನ್ನು ನೋಡಿ ಹೆದರಿದ್ದಲ್ಲದೆ ಶ್ರೀಧರನು ಏನೋ ಕೃತ್ರಿಮ ಮಾಡಿರಬಹುದೆಂದು ತಿಳಿದು ಸಿಟ್ಟಿಗೆದ್ದವನಾಗಿ ಅವನನ್ನು ಕಾರಾಗೃಹದಲ್ಲಿಟ್ಟನು.

ಅತ್ತ ದೇವನ ರತ್ನಖಚಿತ ಆಸನವು ಕಂಪಿಸಲು ಏನು ಕಾರಣವಿರಬಹುದೆಂದು ಮನದಲ್ಲಿ ವಿಚಾರಿಸಲು ಸಮ್ಯಕ್ತ್ವ ಚೂಡಾಮಣಿಯಾದ ಶ್ರೀಧರನಿಗೆ ಉಂಟಾದ ಸಂಕಟವು ಅವಧಿಜ್ಞಾನದಿಂದ ತಿಳಿಯಿತು. ಆಗ ದೇವನು ತನ್ನ ಹಿಂದಿನ ಜನ್ಮದ ಒಡೆಯನಿಗಾದ ತೊಂದರೆಯ ಸೇಡು ತೀರಿಸಬೇಕೆಂದು ತನ್ನ ವಿದ್ಯಾವೈಖರಿಯಿಂದ ಬೇರೆ ರೂಪವನ್ನು ತಾಳಿ ಮಳೆ ಮೋಡಗಳ ಘರ್ಜನೆಯಿಂದ ಬಂದು ಅರಸನಿಗೆ ಪೀಡಿಸಲು ಅವನು ಹೆದರಿ ದೇವನನ್ನು ಬೇಡಿಕೊಳ್ಳಲು ದೇವನು " ವಿಚಾರಶೀಲನೂ ಧರ್ಮವಂತನೂ ಆದ ಶ್ರೀಧರನನ್ನು ಕಾರಾಗೃಹದಿಂದ ಬಿಡಬೇಕು. ಅಲ್ಲದೆ ಈಗ ಕೊಟ್ಟಿರುವ ತೊಂದರೆಯನ್ನು ಮನಸ್ಸಿಗೆ ತಾರದೆ ಕ್ಷಮಿಸಬೇಕೆಂದು ನಾಗಸ್ತ್ರೀಯನ್ನು ಬೇಡಿಕೊಳ್ಳಬೇಕು. ಆ ರತ್ನಾಹಾರವನ್ನು ಸಮ್ಯಕ್ತ್ವವತಿಯೂ ಪತಿ ಭಕ್ತಿಪಾರಾಯಣಳೂ ಆದ ನಾಗಸ್ತ್ರೀಗೆ ಕೊಡಬೇಕು. ಅಂದರೆ ನಿಮಗೆ ಬಂದಿರುವ ಸಂಕಟವು ದೂರಾಗುವದು. " ಎಂದು ಹೇಳಿದನು. ಇವನ ಮಾತುಗಳಿಗೆ ರಾಜನು ಒಪ್ಪಿ ಹಾರವನ್ನು ತಿರುಗಿ ಕೊಟ್ಟನು. ರಾಣಿಯ ಕೊರಳಿನಲ್ಲಿ ಸರ್ಪವಾಗಿದ್ದ ಹಾರವು ನಾಗಸ್ತ್ರೀಯ ಸ್ಪರ್ಶವಾದ ಕೂಡಲೆ ಯಥಾಪ್ರಕಾರ ರತ್ನಾಹಾರವೇ ಆಯಿತು. ಇದನ್ನು ಕಂಡು ನೆರೆದಿದ್ದವರೆಲ್ಲ

ನಾಗಶ್ರೀಯ ಸಮ್ಯಕ್ತ್ವ ಮತ್ತು ಪತಿವ್ರತಾ ಧರ್ಮಗಳನ್ನು ಹೊಗಳಿದರು. ದೇವನು ನಡೆದ ವೃತ್ತಾಂತವನ್ನೆಲ್ಲ ಸಮಸ್ತ ಸಭಾ ಜನಗಳಿಗೂ ಹೇಳಿ ಸಮ್ಯಕ್ತ್ವದ ಮಹಿಮೆಯನ್ನು ಹೇಳುತ್ತಾ ತನ್ನ ಮೂರು ಭವದ ವೃತ್ತಾಂತವನ್ನು ಹೇಳಿ ಶ್ರೀಧರನಿಗೂ ನಾಗಶ್ರೀಗೂ ಆಶೀರ್ವದಿಸಿ ಅದೃಶ್ಯನಾದನು.

ಮಹಾಶಯರೆ ! ಸಮ್ಯಕ್ತ್ವವಂತರು ಎಷ್ಟು ಕಷ್ಟಗಳು ಬಂದರೂ ಪಾರಾಗಿ ಪುಣ್ಯ ಜೀವಿಗಳಾಗಿ ಉದ್ಭವಿಸಿ ವರ್ಣನಾತೀತವಾದ ಸುಖ ಸಂಪತ್ತುಗಳನ್ನು ಪಡೆಯುವರೆಂಬುದಕ್ಕೆ ಈ ಕಥೆಯೇ ನಿದರ್ಶನವಾಗಿರುತ್ತದೆ. ಇದರಂತೆಯೇ ಸರ್ವರೂ ಸಮ್ಯಕ್ತ್ವವಂತರಾಗಿ ಅಹಿಂಸಾ ಧರ್ಮವನ್ನು ಪರಿಪಾಲಿಸಿದರೆ ಅಸದೃಶವಾದ ಕೈವಲ್ಯಾಂಗನೆಯ ಪಾಣಿಗ್ರಹಣ ಮಾಡಲು ಸಂಶಯವಿರುವದಿಲ್ಲವೆಂದೂ, ಈ ಕಥೆಯನ್ನು ಸಾವಧಾನದಿಂದ, ತದೇಕಚಿತ್ತರಾಗಿ ಓದಿ, ಕೇಳಿ ಸರ್ವರೂ ತಿಳಕೊಂಡು ಧರ್ಮ ಪ್ರಭಾವನೆಯನ್ನು ಮಾಡುವವರಿಗೆ ಇಹ-ಪರಲೋಕಗಳಲ್ಲಿ ಸುಖ ಸಂಪತ್ತುಗಳುಂಟಾಗುತ್ತವೆಂದೂ ಹೇಳಿ ಈ ಕಥಾಸಾರಾಂಶವನ್ನು ಸಮಾಪ್ತಗೊಳಿಸುವೆನು.

ನೋಡಿರಿ. ಹೊಲತಿಯು ಹೋಸ ವೃತ ಮಾಡಿದ್ದು ತನ್ನ ಗಂಡನು ಎಷ್ಟು ಪರಿಯಿಂದಾ ಊಟ ಮಾಡಿಸಬೇಕೆಂದು ಆಗ್ರಹ ಮಾಡಿದರೂ ಅವಳು ಮಾತ್ರ ತಮ್ಮ ಸಮ್ಮಕ್ತ್ವದಿಂದಾ ಪ್ರಾಣ ಹೋದರೂ ಚಿಂತಿಯಿಲ್ಲಾ ಪರಂತು ತನ್ನ ಧರ್ಮ ಮಾರ್ಗವನ್ನು ಬಿಡಲಿಲ್ಲಾ. ಧರ್ಮ ಮಾರ್ಗದಿಂದಾ ಗಂಡನ ಮಾತು ಮೀರಿದರೂ ಅಡ್ಡಿಯಿಲ್ಲಾ. ಅಧರ್ಮವಾಗುವದಿಲ್ಲಾ ಅಂತಾ ನಾವು ಸಾರಿ ಹೇಳುತ್ತೇವೆ.

ನನ್ನ ಭಾರತದ ಭಗಿನಿಯರೇ ನನಗೆ ಅನುಭವವಿದ್ದಷ್ಟು ಬರೆದಿರುತ್ತೇನೆ. ಇದನ್ನು ಗಂಡಸರೂ ಹೆಣ್ಣು ಮಕ್ಕಳೂ ಓದಿ ಇದರಂತೆ ನಡೆದುಕೊಂಡರೆ ಜಗತ್ತಿನಲ್ಲಿ ಸ್ತ್ರೀ ರತ್ನದ ಬೆಲೆ ಮಾಡುವರಾರು ? ಯಾರೂ ಮಾಡಲಶಕ್ಯ ಆದ್ದರಿಂದಾ ನೀವು ಅದರಂತೆ ನಡೆದರೆ ಮಾತ್ರ

ನಾನು ಶ್ರಮವಹಿಸಿಕೊಂಡು ಬರೆದದ್ದು ಸಾಫಲ್ಯ ಆಗುವದು. ಇದನ್ನು ಉಪಯೋಗ ಮಾಡದೇ ನಿರುಪಯೋಗ ಮಾಡಿದರೆ ಕುಡಿಯಲಿಕ್ಕೆ ಯೋಗ್ಯವಾದ ಹಾಲನ್ನು ಕಾಲು ತೊಳಿಯಲಿಕ್ಕೆ ಉಪಯೋಗ ಮಾಡಿದಂತಾಗುವದು. ಇನ್ನು ಮುಂದೆ ಸಮ್ಯಕ್ತ್ವಮಿಥ್ಯಾತ್ವದ ಎಂದೆರಡು ಮಾತು ತಿಳಿಸಿ ಗ್ರಂಥವನ್ನು ಮುಗಿಸುತ್ತೇವೆ. ಇದರಲ್ಲಿ ಕುಂದು ಕೊರತೆಗಳಿದ್ದಲ್ಲಿ ತಿಳಿಸಿದರೆ ಮುಂದಿನ ವೃತ್ತಿಯಲ್ಲಿ ತಿದ್ದುತ್ತೇವೆ.

ತಂಗೀ, ಸಮ್ಯಕ್ತ್ವ ಮತ್ತು ಮಿಥ್ಯಾತ್ವದ ಎರಡು ಮಾತು ತಿಳಿಸುತ್ತೇವೆ ಚಿತ್ತವಿಟ್ಟು ಕೇಳು. ಒಂದು ಕಿವಿಯಿಂದಾ ಕೇಳಿ ಒಂದು ಕಿವಿಯಿಂದಾ ಬಿಡಬೇಡಾ. ಎಚ್ಚರದಿಂದಾ ಕೇಳು ಹೇಳುತ್ತೇವೆ. ಸಮ್ಯಕ್ತ್ವಕ್ಕೆ ಇಪ್ಪತ್ತೈದು ಮಲದೋಷ ಇರುತ್ತವೆ. ಯಾವವೆಂದರೆ ಮೂರು ಮೂಢತಾ, ಎಂಟು ಶಂಕಾದಿ ದೋಷ, ಆರು ಅನಾಯಿತ, ಎಂಟು ಮದ ಈ ಪ್ರಕಾರ ಇಪ್ಪತ್ತೈದು ದೋಷರಹಿತರಿರಬೇಕು.

ಮೂರು ಮೂಢತಾಃ— ದೇವ ಮೂಢತಾ, ಗುರು ಮೂಢತಾ, ಶಾಸ್ತ್ರ ಮೂಢತಾ

ಎಂಟು ಶಂಕಾದ ದೋಷಃ— ಶಾಂಕಾ, ಕಾಕ್ಷಾ, ಚಿಕಿತ್ಸಾ, ಮೂಢದೃಷ್ಟಿ, ಅಪುಗುಹನ ಅಸ್ಥಿತಿಕರಣ, ಅವಾತ್ಸಲ್ಯಾ, ಅಪ್ರಭಾವನಾ

ಆರು ಅನಾಯುತಃ— ಕುದೇವ, ಕುಗುರು, ಕುಶಾಸ್ತ್ರ ಇವುಗಳನ್ನು ಸೇವನೆ ಮಾಡುವರು. ಮೂರು ಅಂತು ಆರು ಅನಾಯುತ.

ಎಂಟು ಮದಃ— ಜಾತಿ, ಕುಲ, ಐಶ್ವರ್ಯ, ರೂಪ, ಶಾಸ್ತ್ರ, ತಪ, ಬಲ, ವಿಜ್ಞಾನ ಮದವೆಂದು ಎಂಟು ಪ್ರಕಾರ ಇರುತ್ತವೆ.

ಜಾತಿ ಮದ ಅಂದರೆ— ತಾಯಿ ಪಕ್ಷದಿಂದಾ ಜಾತಿ ನಾನು ಚಲೋ ತಾಯಿ ಹೊಟ್ಟಿಲೆ ಹುಟ್ಟಿರುತ್ತೇನೆ. ಅಂತಾ ಗರ್ವ ಪಡುವದು, ಜಾತಿ ಮದ.

ಕುಲ ಮದಃ— ನನ್ನ ತಂದೆಯು ಉತ್ತಮ ವಂಶದವನು ಅಂತಾ ಗರ್ವ ಮಾಡುವದು ಕುಲಮದ.

ಐಶ್ವರ್ಯ ಮದಃ— ನಾನು ಶ್ರೀಮಂತನು ನನ್ನ ಸರಿ ಯಾರೂ ಇಲ್ಲಾ ಅಂತಾ ಅನ್ನುವದು ಐಶ್ವರ್ಯ ಮದ.

ರೂಪ ಮದಃ— ನಾನು ಬಹಳ ಸುಂದರನು ನನ್ನಷ್ಟು ಸುಂದರ ಯಾರೂ ಇಲ್ಲಾ ಅನ್ನುವದೇ ರೂಪ ಮದ.

ಶಾಸ್ತ್ರ ಮದಃ— ನಾನು ಶಾಸ್ತ್ರಿಯಿದ್ದೇನೆ. ನನ್ನ ಸರಿ ಯಾರೂ ಇಲ್ಲಾ. ನನ್ನ ಮಾತೇ ಖರೆ ಅನ್ನುವದೇ ಶಾಸ್ತ್ರ ಮದವು. ಈ ಮದವು ಮಾಡುವವರಿಗೆ ಶಾಸ್ತ್ರವು ಶಸ್ತ್ರವೇ ಸರಿ.

ತಪ ಮದಃ— ನಾನು ದೊಡ್ಡ ತಪಸ್ವಿಯು. ನಾನು ಕಲಿತವ ನಿದ್ದೇನೆ ನನ್ನ ಸರಿ ಯಾರು ಇಲ್ಲ. ನಾನು ಎಲ್ಲ ಕಡೆ ತಿರಿಗಿದ್ದೇನೆ. ನ್ನಾನು ಎಲ್ಲರಿಗೂ ಉತ್ತರ ಕೊಡುತ್ತೇನೆ. ಅನ್ನುವಗಮಿಂಡಿ ಮದ ಇರುತ್ತದೆ. ದೀಕ್ಷೆ ತಗೊಂಡು ಬಹು ದಿವಸ ಆಯಿತು. ನನ್ನನ್ನು ಎಲ್ಲರೂ ಮನ್ನಿ ಸುತ್ತಾರೆ. ಈ ಪ್ರಕಾರ ತಿಳಕೊಳ್ಳುವದೇ ತಪ ಮದ.

ಬಲ ಮದಃ— ನಾನು ಶಕ್ತಿವಾನ ಇದ್ದೇನೆ. ನನ್ನಷ್ಟು ಶಕ್ತಿ ಯಾರದು ಇಲ್ಲಾ ಅನ್ನುವದೇ ಬಲ ಮದ.

ವಿಜ್ಞಾನ ಮದಃ— ನಾನು ಜ್ಞಾನಿ ಇದ್ದೇನೆ. ನಾನೇ ಎಲ್ಲರಿಗೆ ಬುದ್ಧಿ ಹೇಳುತ್ತೇನೆ. ನನ್ನ ಸರಿ ಯಾರೂ ಇಲ್ಲಾ ಅಂತಾ ಗರ್ವ ಪಡುವದೇ ವಿಜ್ಞಾನ ಮದ. ಈ ಪ್ರಕಾರ ಅಷ್ಟ ಮದಗಳು ಇರುತ್ತವೆ.

ಇನ್ನು ಅಷ್ಟಾಂಗಗಳನ್ನು ಹೇಳುತ್ತೇನೆ ಕೇಳು. ಮನುಷ್ಯರಿಗೆ ಕೈ, ಕಾಲು, ಕಣ್ಣು, ಕಿವಿ, ಈ ಪ್ರಕಾರ ಎಂಟು ಅಂಗಗಳಿರುವಂತೆ ಸಮ್ಯಕ್ತ್ವಕ್ಕೆ ಎಂಟು ಅಂಗಗಳು ಇರುತ್ತವೆ.

ನಿಃಶಂಕಿತಾ ಅಂಗಃ— ಸತ್ಯ ದೇವ, ಸತ್ಯಗುರು, ಸತ್ಯ ಶಾಸ್ತ್ರ ಇವುಗಳಲ್ಲಿ ಸಂಶಯರಹಿತವಾದ ನಂಬಿಗೆಯೇ ನಿಃಶಂಕಿತಾಂಗ ಅನ್ನುತ್ತಾರೆ.

ನಿಃಕಾಂಕ್ಷಿತ ಅಂಗ:— ಸಂಸಾರ ಸುಖವು ಪರಾಧೀನವಾದುದು. ಯದ್ಯಪಿ ಪುಣ್ಯ ಕರ್ಮೋದಯದಿಂದ ಸುಖ ಪ್ರಾಪ್ತವಾದರೂ ಎಂದಾದರೊಮ್ಮೆ ಬಿಡತಕ್ಕದ್ದೆಂದು ತಿಳಿದು ಸಂಸಾರವನ್ನು ತೊರೆದು ಬಿಡುವದು ನಿಃಕಾಕ್ಷಿತಾ ಅಂಗವು.

ನಿರ್ವಿಚಿಕಿತ್ಸಾ ಅಂಗಃ— ಶರೀರವು ಯಾವಾಗಲೂ ಅಪವಿತ್ರ ಸ್ವಭಾವ ಉಳ್ಳದ್ದೂ .ರಕ್ತ, ಮಾಂಸ, ವೀರ್ಯ ಮೊದಲಾದ ಸಪ್ತ ಧಾತುಗಳಿಂದ ಕೂಡಿದೆ. ಆದರೂ ಸಮ್ಯಕ್ತ್ವದೃಷ್ಟಿಯು ವಸ್ತುವಿನ ಸ್ವರೂಪವನ್ನರಿತವನಿದ್ದರಿಂದಾ ಈ ಶರೀರದ ಸ್ವಭಾವವೇ ಈ ರೀತಿಯಿರುವದೆಂದು ತಿಳಿದು ಹೇಸಿಕೆ ಪಡದಿರುವದೇ ನಿರ್ವಿಚಿಕಿತ್ಸ ಅಂಗವು.

ಅಮೂಢ ದೃಷ್ಟಿಃ— ಮಿಥ್ಯಾ ಧರ್ಮಿಗಳನ್ನೇ ಮನವಚನ ಕಾಯಗಳಿಂದಾ ಸಮ್ಮತಿಸಿ ಆದರ ಪ್ರಶಂಸೆ ಸಹಾಯ ಮಾಡದಿರುವದಕ್ಕೆ ಅಮೂಢ ದೃಷ್ಟಿ ಅನ್ನುತ್ತಾರೆ.

ಉಪಗೂಹನ ಅಂಗಃ— ಅನಾದಿ ನಿಧನವೂ ಆದ ಜೈನ ಧರ್ಮವು ಸಮಸ್ತ ಜೀವರಾಶಿಗಳಿಗೆ ಹಿತಕರವೂ ನಿರ್ದೋಷವೂ ಬಾಧೆ ರಹಿತವೂ ಆಗಿದೆ. ಇಂಥಾ ಪವಿತ್ರ ಆದ ಧರ್ಮಕ್ಕೆ ಅಜ್ಞಾನಿಗಳಾದ ಮಿಥ್ಯಾದೃಷ್ಟಿಗಳಿಂದಾದ ನಿಂದೆ ಅಥವಾ ದೂಷಣಗಳನ್ನು ಅಸಮರ್ಥರಾದ ಜನಗಳಿಂದಾದ ನಿಂದೆಯುನ್ನು ದೂರ ಮಾಡಿ ತಾಯಿಯು ತನ್ನ ಮಗನು ನಿಂದಕರವಾದ ಮಾರ್ಗದಲ್ಲಿ ಪ್ರವರ್ತಿಸಿದರೂ ಆತನನ್ನೆ ಪ್ರೀತಿಸುವಂತೆ ಧಾರ್ಮಿಕರು ತನ್ನ ಸ್ವಧರ್ಮಿಗಳಲ್ಲಿರುವ ದೋಷಗಳನ್ನು ಗುಪ್ತರೀತಿಯಿಂದಾ ಹೋಗಲಾಡಿಸಿ ಅವರಲ್ಲಿ ಪ್ರೀತಿಯಿಡುವದಕ್ಕೆ ಉಪಗೂಹನ ಅಂಗ ಅನ್ನುತ್ತಾರೆ.

ಸ್ಥಿತಿಕರಣ-ದೇವಗುರು ಶಾಸ್ತ್ರಗಳಲ್ಲಿ ದೃಢವಾದ ನಂಬಿಗೆ ಯುಳ್ಳ ಸಮ್ಯಕ್ತ್ವದೃಷ್ಟಿಯು ತಮ್ಮ ವೃತ ಸಂಯಮಾದಿಗಳಿಂದಾ ಚ್ಯುತರಾದರೆ ದುರ್ಜನರ ಸಂಘದಿಂದಾಗಲಿ ರೋಗ ಮೊದಲಾದ ವೇದನೆಗಳಿಂದಾಗಲಿ ಮಿಥ್ಯೋಪದೇಶದಿಂದಾಗಲಿ ಧರ್ಮ ಮಾರ್ಗ ಬಿಟ್ಟಿದ್ದರೆ ಅವರನ್ನೇ ಯಥಾರ್ಥ ಉಪದೇಶ ಮಾಡಿ ಧರ್ಮದಲ್ಲಿ ಧೃಡ ಮಾಡುವದೇಸ್ಥಿತಿಕರಣ ಅಂಗವು

ವಾತ್ಸಲ್ಯ ಅಂದರೇನು— ಋುಷಿ, ಅರ್ಜಿಕಾ, ಶ್ರಾವಕ, ಶ್ರಾವಿಕೆಯರೆಂಬ ಚತಸ್ಸಂಘಗಳಿಗೆ—ಶುಭಪರಿಣಾಮದಿಂದಾ ಕಪಟವಿಲ್ಲದೆ ಆದರ ಸತ್ಕಾರ ಮಾಡುವದೇ ವಾತ್ಸಲ್ಯ ಅಂಗವು.

ಪ್ರಭಾವನಾ ಅಂಗ ಅಂದರೇನು— ದಾನ, ಪೂಜೆ, ವ್ಯಾಖ್ಯಾನ, ಗ್ರಂಥ ಪ್ರಕಾಶನ ಮುಂತಾದವುಗಳಿಂದ ಜೈನ ಧರ್ಮದ ಮಹತ್ವವನ್ನು ಪ್ರಕಟ ಮಾಡುವದೇ ಪ್ರಭಾವನ ಅಂಗವು.

ಈ ಪ್ರಕಾರ ಎಂಟು ಪ್ರಕಾರ ಅಂಗಗಳಿರುತ್ತವೆ. ಈ ಅಂಗಗಳಲ್ಲಿ ಒಂದು ಇಲ್ಲದಿದ್ದರೆ ಆ ಮನುಷ್ಯನು ಸಮ್ಯಕ್ತ್ವಕ್ಕೆ ಯೋಗ್ಯನಲ್ಲಾ ಅಯೋಗ್ಯನೆಂದು ತಿಳಿಯಬೇಕು. ಅವನು ದಿಗಂಬರ ಮುನಿಯಿರಲಿ ಐಲಕನೇ ಯಿರಲಿ ಕ್ಷುಲ್ಲಕನಿರಲಿ ಕ್ಷುಲ್ಲಕಿಯರಿರಲಿ ಬ್ರಹ್ಮಚಾರಿಯಿರಲಿ ಯಾರೇ ಇದ್ದಲ್ಲಿ ತಮ್ಮ ಆತ್ಮ ಪ್ರಶಂಸೆ ಮಾಡಿಕೊಳ್ಳುವದು ಪರರ ನಿಂದಾ ಮಾಡುವದೂ ಒಳ್ಳೇದಲ್ಲಾ ಅದರಿಂದಾ ತತ್ವಾರ್ಥದಲ್ಲಿ ಹೇಳಿದಂತೆ( ಪರಾತ್ಮನಿಂದಾ ಪ್ರಶಂಸೇ ಸದಸದ್ಗುಣೋಚ್ಛಾಧ ನೊದ್ಭಾವನೆ ಚ ನಿಚೈರ್ಗೋತಶ್ಚ ) ಈ ಸೂತ್ರ ಪ್ರಕಾರ ನೀಚ ಗೋತ್ರ ಬಂಧ ಆಗುತ್ತದೆ ಇದಲ್ಲದೆ ಅನ್ಯಜೀವಗಳ ಅಶಕ್ತದಿಂದಾ ಉಂಟಾದ ದೋಷಗಳನ್ನು ಮುಚ್ಚುವದು ಸಮ್ಯಕ್ತದ ಐದನೇ ಅಂಗವಾಗಿರುತ್ತದೆ. ಅದನ್ನು ಮುಚ್ಚದೆ ಬೈಲಿಗೆಳೆದು ಜನರಲ್ಲಿ ಪ್ರಚಾರ ಮಾಡಿದರೆ

ತನ್ನ ತಾಯಿಯಂತೆ ಇದ್ದ ಜೈನ ಧಾರ್ಮಿಕ ಜನರನ್ನು ನಿಂದಾ ಮಾಡುವವರು ನಿಶ್ಚಯವಾಗಿ ತಮ್ಮಾತ್ಮ ಪ್ರಶಂಸೆ ಮಾಡಿಕೊಳ್ಳುವ ವರೆಂದು ತಿಳಿಯಿರಿ ಇಂಥವರು ಮುನಿಯಿರಲಿ ಕ್ಷುಲ್ಲಕ ಇರಲಿ ಐಲಕ ಇರಲಿ ಬಾಯಿಜೆಮ್ಮಾಯಿರಲಿ ಬ್ರಹ್ಮಚಾರಿಯಿರಲಿ ಶ್ರಾವಕನೇಯಿರಲಿ ಇಂಥವರು ಅಂಗಹೀನರೆಂದು ತಿಳಿಯಬೇಕು. ಮನುಷ್ಯನಿಗೆ ಎಂಟು ಅಂಗಗಳ ಪೈಕಿ ಒಂದು ಇಲ್ಲವಾದರೆ ಅಂಗಹೀನನೆಂದು ಅನ್ನುತ್ತಾರೆ. ಅದೇ ಪ್ರಕಾರ ಸಮ್ಯಕ್ತ್ವ ಪುರುಷನಲ್ಲಿ ಒಂದು ಅಂಗ ಇಲ್ಲದಿದ್ದರೆ ಅವನು ನಾಲಾಯುಖ ಅಂತಾ ಸಂಪೂರ್ಣ ತಿಳಿದುಕೊಳ್ಳಿರಿ. ಈಗ ಸಣ್ಣ ಹೆಣ್ಣು ಮಕ್ಕಳನ್ನು ಕರೆದು ನೀನು ಈ ಕುರುಡನನ್ನು ಅಥವಾ ಕುಂಟನನ್ನು ಮಾಡಿಕೊಳ್ಳುತ್ತೀಯಾ ಅಂದರೆ ಆ ಕುಡ್ಡ ಕುಂಟನನ್ನು ನಾನು ಮಾಡಿಕೊಳ್ಳುವದಿಲ್ಲಾ ಎಂದು ಸ್ಪಷ್ಟ ಹೇಳುತ್ತವೆ ಆ ಅಜ್ಞಾನಿ ಕೂಸು ಹೀಗಂದಬಳಿಕ ಸಮ್ಯಕ್ತ್ವದಿಂದ ಅಂಗಹೀನನನ್ನು ಮೋಕ್ಷಲಕ್ಷ್ಮಿ ಹ್ಯಾಗೆ ಮಾಡಿಕೊಂಡಾಳು ಆದ್ದರಿಂದಾ ಅಷ್ಟ ಅಂಗಗಳನ್ನು ಕಳೆದು ಕೊಳ್ಳಬಾರದು. ಆದ್ದರಿಂದಾ ಸಮ್ಯಕ್ತ್ವ ಶ್ರಾವಕ ಶ್ರಾವಿಕೆಯರು ಅಥವಾ ಮುನಿ, ಐಲಕ, ಕ್ಷುಲ್ಲಕ, ಕ್ಷುಲ್ಲಕಿಯರು ಸಹ ಅನ್ಯ ಜೀವಿಗಳ ದೋಷ ತಪ್ಪು ಆದರೆ ಆದಷ್ಟು ತಿದ್ದಬೇಕು. ಇಲ್ಲವೆ (ದೋಷವಾದೆ ಚ ಮೌನಂ) ಎಂಬ ಸೂತ್ರದಂತೆ ಸುಮ್ಮನೇ ಇರಬೇಕು. ಮನಬಲ್ಲಂತೆ ಧರ್ಮಾತ್ಮರ ನಿಂದಾ ಮಾಡಿದರೆ ತನ್ನ ತಾಯಿಯ ಹಾದರವನ್ನು ತಾನೇ ತಕ್ಕೊಂಡಂತೆ ಅಂತಾ ತಿಳಿಯಿರಿ. ಮತ್ತು ಅವರು ಹನ್ನೊಂದು ಅಂಗ ಹದಿನಾಲ್ಕು ಪೂರ್ವ ಶಾಸ್ತ್ರದಲ್ಲಿ ಪಾರಂಗತರಾದರೂ ಅವರು ಶುದ್ಧ ಮಿಥ್ಯಾ ದೃಷ್ಟಿ ಎಂದು ತಿಳಿ. ಇದರಲ್ಲಿ ಎಳ್ಳು'ಕಾಳಷ್ಟು ಸಂಶೆ ಇಲ್ಲ. ಬರೇ ಶಾಸ್ತ್ರ ಹೇಳಿ ಪಾಲಿಸ್ ನೋಡಿ ಬಡ ಬಡಸುವವರ ಮಾತು ಕೇಳಬೇಡ. ಮತ್ತು ಇನ್ನೊಂದು ವಿಚಾರ ಹೇಳುತ್ತೇನೆ ದಿಗಂಬರ ಮುನಿಯರಲಿ ಐಲಕ ಇರಲಿ ಕ್ಷುಲ್ಲಕ ಇರಲಿ ಕ್ಷುಲ್ಲಿಕಿಯ ರಿರಲಿ ( ಬಾಯಿಜೆಮ್ಮಗಳಿರಲಿ ) ಇವರಿಗೆ ಬೇಕಾಗುವ ಶಾಸ್ತ್ರ ಅನ್ನ,

ಔಷಧ, ವಸ್ತ್ರ ಅವಶ್ಯ ಕೊಡತಕ್ಕದ್ದು. ಶಾಸ್ತ್ರ ಪ್ರಕಟಿಸುವದಿದ್ದರೆ ಎಷ್ಟು ಖರ್ಚು ಅವೆ, ಅದಕ್ಕೆ ಕಾಗದ ಎಷ್ಟು ಪ್ರಿಂಟಿಂಗ ಖರ್ಚು ಎಷ್ಟು ಎಂಬುದನ್ನು ವಿಚಾರ ಮಾಡಿ ಅವರು ಮಾಡಿಸುವರೆಂದು ಖಾತ್ರಿಯಿದ್ದರೆ ಮತ್ತು ನಿಮ್ಮ ಶಕ್ತಿಯಿದ್ದಷ್ಟು ಕೊಡಬೇಕು. ಜರ ಖಾತ್ರಿ ಇಲ್ಲದಿದ್ದ ಪಕ್ಷದಲ್ಲಿ ಆಹಾರ, ಔಷಧ, ಅಭಯದಾನ ಶಾಸ್ತ್ರವನ್ನು ಬೇಡಿದರೆ ತರಿಸಿ ಕೊಡಬೇಕು. ತಿಕೀಟ ಕೊಡಬೇಕು. ಸರ್ವಥಾ ಅವರ ಕೈಯಲ್ಲಿ ಹಣ ಕೊಡಬಾರದು. ಇವೆಲ್ಲಾ ಮಾತು ನೆನಪಿನಲ್ಲಿಟ್ಟುಕೋ. ಮೋಸ ಹೋಗಬೇಡ. ಇದನ್ನು ಶಾಂತ ಚಿತ್ತದಿಂದ ಓದಿ ಭಾರತಿಯ ಭಗಿನಿಯರು ತಮ್ಮ ಆತ್ಮಕಲ್ಯಾಣ ಮಾಡಿಕೊಳ್ಳುವರೆಂದು ನಮ್ಮ ಶ್ರಮದ ಸಾಫಲ್ಯ ಆಗಲೆಂದು ಶ್ರೀ ಜಿನೇಶ್ವರರನ್ನು ಬೇಡಿಕೊಳ್ಳುತ್ತೇವೆ.

## ಸ್ತ್ರೀಯಳ ರತ್ನ ಯಾವದು ?

ಸ್ತ್ರೀಯಳ ರತ್ನದ ಬಗ್ಗೆ ನಾಲ್ಕು ಗೆಳತಿಯರು ಕೂಡಿ ಸಂಭಾಷಣೆ ಮಾಡುವರು.

**ಪಾತ್ರಗಳುಃ—** ಕಮಲಾ, ಹೀರಾ, ರತ್ನಾ, ಪದ್ಮಾ. ಈ ನಾಲ್ಕು ಮಂದಿಯೂ ವಿವಾಹಿತ ಸಖಿಯರು, ಇವರೆಲ್ಲರೂ ಥೀಟ ಥಾಟದ ಹಬ್ಬವಾದ ನಾಗರಪಂಚಮಿ ಹಬ್ಬಕ್ಕೆ ತಮ್ಮ ತಮ್ಮ ಪತಿಗಳ ಮನೆಯಿಂದ ತವರೂರಿಗೆ ಬಂದರು. ಇವರೆಲ್ಲರ ತವರೂರು ಒಂದೇ ಊರು. ಬಾಲ ಗೆಳತಿಯರು. ಪದ್ಮಾ ಮಾತ್ರ ಪತಿಗೃಹ, ಪಿತೃಗೃಹ ಇದ್ದೂರಲ್ಲಿಯೇ ಪಡೆದಿದ್ದಳು. ನಾಗರ ಪಂಚಮಿಯ ಹಬ್ಬವನ್ನು ಈ ನಾಗ ಗಮನಿಯರೆಲ್ಲ ಮುಗಿಸಿದರು. ಮುಂದೆ ಮೂರು ನಾಲ್ಕು ದಿವಸಗಳಾದ ಮೇಲೆ ತಿರುಗಿ ಬೇಗ ಬರಬೇಕೆಂಬ ಪತಿಯ ಅಪ್ಪಣೆಯ ಪ್ರಕಾರ, ಹೋಗಬೇಕೆಂದು ರತ್ನಾ ಕಮಲೆಯ ಮನೆಗೆ ಸಹಜ ಬಂದಳು. ಕಮ

ಲಿಗೆ 'ನೀನು' ಎಷ್ಟು ದಿವಸ ಇಲ್ಲಿ ನಿಲ್ಲುವಿ. ನಾನು ಮಾತ್ರ ಬೇಗ ಹೋಗಬೇಕಾಗಿದೆ, ಎಂದು ಅಂದಳು.

**ಕಮಲೆ:**— ಇಷ್ಟು ಬೇಗ ಹೋಗಬೇಕೇ ?

**ರತ್ನಾ:**— ಹೌದು ಕಮಲಕ್ಕಾ.

**ಕಮಲೆ:**— ಏನೇ ರತ್ನಾ, ನಮ್ಮೆಲ್ಲರ ಲಗ್ನವಾಗಿ ೨-೩ ವರುಷವಾಯಿತು. ಈಗ ಈ ಪಂಚಮಿಯ ಹಬ್ಬದ ನಿಮಿತ್ಯ ನಾವೆಲ್ಲರೂ ಕೂಡಿರುವೆವು. ದೊಡ್ಡ ಮನೆಯ ಹೀರಾನೂ ಬಂದಿರುವಳು. ಎಲ್ಲರೂ ಕೂಡಿ ಸುಖ, ದುಃಖ, ಸರಲ ಸಲ್ಲಾಪಗಳ ಮಾತು ಕಥೆಗಳನ್ನು ಮಾತಾಡೋಣ. ಹೀಗೆ ನಾವೆಲ್ಲರೂ ಇನ್ನೆಂದು ಕೂಡುವೆವೊ? ದೇವರೇ ಬಲ್ಲ. ಆದ್ದರಿಂದ ನಾಲ್ಕು ದಿವಸ ತಡೆದು ಹೋಗುವಿಯಂತೇ.

ಇದೇ ಕಾಲಕ್ಕೆ ಮೂರು ನಾಲ್ಕು ಮನೆಯ ಆಚೆಯಿಂದ ಹೀರಾ ಅಳುತ್ತಿರುವ ತನ್ನ ತಮ್ಮನನ್ನು ರಮಿಸುತ್ತ ಕಮಲೆಯ ಮನೆಗೆ ಬಂದಳು.

**ಕಮಲೆ:**— ಹೀರಾ, ನಿನ್ನನ್ನು ನೆನಿಸುವಾಗ್ಗೆ ಸರಿಯಾಗಿ ಬಂದೆ. ತುಂಬಾ ಆಯುಷ್ಯವಂತಳು ನೀನು.

**ಹೀರಾ**— ಏತಕ್ಕೆ ನಮ್ಮವ್ವಾ, ಬೇಗನೆ ಜಗತ್ತು ಬಿಟ್ಟು ಜಗದೀಶನ ಹತ್ತಿರ ಹೋಗುವದೇ ಒಳಿತು.

**ಕಮಲೆ**— ಯಾಕೆ ಹೀರಾ, ನಿನಗೂ ಈ ಜಗತ್ತಿನಲ್ಲಿ ಇರಲಿಕ್ಕೆ ಬೇಸರವೇ ?

**ಹೀರಾ**— ಹೌದು. ಆದರೆ ಬೇಸತ್ತರೂ ಆಸತ್ತರೂ ಆಯುಷ್ಯ ತುಂಬುವವರೆಗೆ ಇರಲಿಕ್ಕೇಬೇಕಲ್ಲವೇ ? ಇದಿರಲಿ. ಕಮಲಕ್ಕಾ ನನ್ನನ್ನು ನೆನಿಸಿದುದೇಕೆ ?

**ಕಮಲೆ—** ಈ ರತ್ನಾ ಪತಿಯ ಮನೆಗೆ ಬೇಗ ಹೋಗು ತ್ತಾಳಂತೆ ನೀನೂ ಬಂದಿರುವೆ. ಆದ್ದರಿಂದ ನಾಲ್ಕು ದಿವಸ ತಡೆದು ಹೋಗು ಎಂದು ಹೇಳಿದೆನು.

**ಹೀರಾ—** ಇದೇ ಮಾತೇ? ನಾನಾದರೂ ಆದಷ್ಟು ಬೇಗ ಹೋಗಬೇಕು.

**ರತ್ನಾ ಮತ್ತು ಹೀರಾ—** ಕಮಲಾ ನೀನೇನು ಬಹಳ ದಿವಸ ಇಲ್ಲಿಯೇ ಇರುವಂತೆ ಕಾಣುತ್ತದೆ.

**ಕಮಲೆ—** ಇಲ್ಲ, ಇಲ್ಲ, ನಾನೆಲ್ಲಿದ್ದರೂ ನನ್ನ ಮನಸ್ಸಿನ ಆರಾಮವಿಲ್ಲದ ವಿರಾಮ ಮೂರ್ತಿಯಂತೆ ಆಗಿರುವೆನು.

**ಹೀರಾ—** ಹಾಗೆಂದರೇನು ಕಮಲಾ? ನೀನಿದ್ದ ಊರಲ್ಲಿ ಯಾವ ತ್ರಾಸವಿರುವದು? ನೀರು ತರುವದು, ಕುಟ್ಟುವದು, ಬೀಸುವದು. ಯಾವ ಕೆಲಸವೂ ಇಲ್ಲ. ನಿನ್ನ ಗಂಡನಂತೂ ಅಮಲದಾರ ನೀನು ಅಮಲ ದಾರತಿ ಅಂದ ಮೇಲೆ ಕೇಳುವದೇನು? ನಿಮ್ಮಿಬ್ಬರ ನಡುವೆ ಓಡಾ ಡುವ ಆಳು ಸಿಪಾಯಿಗಳಿಗೇನು ಕಡಿಮೆ. ಹೀಗಿದ್ದು ಅರಾಮವಿರಲಿಕ್ಕೆ ನಿನಗೇನು ಕಡಿಮೆಯಾಗಿದೆ?

**ರತ್ನಾ—** ಹೀರಾಬಾಯಿ, ಎಲ್ಲವೂ ನಿನ್ನಂತೆ ತಿಳಿದಿರುವೆ. ನಿಮ್ಮೂರಲ್ಲಿ ನೀನು ಬೀಸುವದು, ನೀರು ತರುವದು, ಒಕ್ಕಲಕ್ಕೆ ಹೋಗುವದು, ಇವೆಲ್ಲ ಕೆಲಸ ಮಾಡುವಿಯೇನೋ, ಅದರಂತೆ ಹೇಳುವೆ. ಕೆಲಸ ಮಾಡುವದು ಶರೀರಕ್ಕೆ ಒಳ್ಳೇ ಉಪಕಾರಿಯಾಗಿ ರುವದು. ಮನುಷ್ಯನಿಗೆ ಕೆಲಸ ಅಗತ್ಯ ಬೇಕು. ಕೆಲಸವಿಲ್ಲದಿದ್ದರೆ ಪ್ರಕೃತಿ ಎಲ್ಲ ಹಾಳಾಗಿ ಆಲಸ್ಯವಂತನಾಗುವನು. ಇದು ನಿಜ, ಇದಿ ರಲಿ. ಹೀರಾ, ನಿಮ್ಮೂರ ಕೆರೆಯಲ್ಲಿ ನೀರಿಲ್ಲವಂತೆ, ಕೆರೆ ಅಗೆಯು ತ್ತಿರುವರಂತೆ, ಜನರಿಗೆ ನೀರಿನ ತ್ರಾಸ ಬಹಳ ನಡೆದಿದೆಯಂತೆ, ಹೌದೇ?

**ಹೀರಾ**— ಹೌದು ತಾಯೀ, ಆ ಊರಲ್ಲಿ ನೀರಿನ ಸಲುವಾಗಿ ಸಾಕು ಸಾಕಾಗಿರುವದು. ಊರಿಗೆ ಎರಡೇ ಸವಿನೀರಿನ ಭಾವಿಯಿರುವವು. ನೀರಿನ ಸಲುವಾಗಿ ಬೇಸಿಗೆಯಲ್ಲಂತೂ ಬೇಸರ ಹಿಡಿಯುವದು. ಕೆರೆಗೆ ನೀರಿಲ್ಲದ್ದರಿಂದ ನಸುಕಿನಲ್ಲಿ ಭಾವಿಯಲ್ಲಿಯ ನೀರು ಚಿಪ್ಪಿನಿಂದ ತುಂಬಿಕೊಂಡು ಬರಬೇಕಾದರೆ ರಾಮಾಯಣ ಮುಗಿದು ಮಹಾಭಾರತ ಸುರುವಾಗುವದು. ಇದಲ್ಲದೆ ಅಲ್ಲಿಯ ಜನರು ಮನೆಗೆ ಬೀಗ ಹಾಕಿ ಒಕ್ಕಲಕ್ಕೆ ಹೋದರೆ ತಿರುಗಿ ಸೂರ್ಯ ಮುಳುಗಿದ ಮೇಲೆ ಮನೆಗೆ ಬರುವರು. ಮಧ್ಯಾನ್ಹ ನೋಡಬೇಕು, ಊರೆಲ್ಲ ರಣ ರಣ ಹೊಡೆಯುವ ಬಿಸಲಿನ ಬಿಡಾರವಾಗುವದು. ರತ್ನಾ, ನಮ್ಮೂರ ಕಥೆಯನ್ನು ನಿನಗಾರು ಹೇಳಿದರು ?

**ರತ್ನಾ**— ಯಾರು ಯಾತಕ್ಕೆ ಹೇಳಲಿಕ್ಕೆಬೇಕು. ಜಗತ್ತಿನ ಸುದ್ದಿಯನ್ನು ತಿಳಿಸುವ ವರ್ತಮಾನದವನು ತಿಳಿಸಿದನು.

**ಹೀರಾ**— ಅದಾವ ವರ್ತಮಾನದವನು ? ಅವನಿಗೆಲ್ಲವು ಗೊತ್ತಿರುವದೇ ?

**ರತ್ನಾ**— ಹೀರಾ, ಇದೂ ನಿನಗೆ ತಿಳಿಯಲಿಲ್ಲವೇ? ವರ್ತಮಾನ ಅಂದರೆ ಸುದ್ದಿ ಪೇಪರಗಳು. ವರ್ತಮಾನಪತ್ರ ಅನ್ನುವರು ಅವಕ್ಕೆ. ದಿವಸಾ ಬೇಕಾದಷ್ಟು ಬೇರೆ ಬೇರೆ ಹೆಸರಿನಿಂದ ಜಗತ್ತಿನ ಸುದ್ದಿ, ಜಗತ್ತಿನ ತುಂಬೆಲ್ಲ ಹರಡುವವು.

**ಹೀರಾ**— ವರ್ತಮಾನ ಪತ್ರವೇ ? ವರ್ತಮಾನದವನು ಅಂದೆ, ಅದಕ್ಕೆ ಅವನಾರು ಎಂದು ಕೇಳಿದೆ. ರತ್ನಾ ನೀನು ಪುಣ್ಯವಂತೆ. ಅಂದಲ್ಲೇ ಮನೆಯಲ್ಲಿ ಬಂದು ಬೀಳುವ ನಳದ ನೀರುಂಡು ವರ್ತಮಾನ ಪತ್ರ ಓದಿ ಸತಿ ಪತಿಯಿಬ್ಬರೂ ಸರಳ ರೇಷೆಯಲ್ಲಿ ಸಿನೇಮಾ ನಾಟಕ, ಜಿಗಿದಾಟ, ಕುಣಿದಾಟ, ಮುಗಿಸಿ ನಿಮ್ಮಿಬ್ಬರ ಭುಜಗಳಿಗೆ ತಿಕ್ಕಾಟ ಹಚ್ಚಿ, ಕೈಗಳನ್ನು ಚಂದ್ರಮನ ಚಲುವಿಕೆಯಲ್ಲಿ ಕೋಲ

ಮಿಂಚಿನಂತೆ ಬೀಸಾಡುತ್ತ ತಿರುಗಿ ಮನೆಗೆ ಬಂದಾಗ ನಿಮ್ಮ ಅತ್ತಿ ಮನ್ನವ್ಮ ಮಂಗಳಾರತಿ ಮಾಡಬೇಕು ಅಲ್ಲವೇ ?

**ರತ್ನಾ**— ಹೀರಾ ನಮ್ಮದೆಲ್ಲ ನೀನೆಂದು ನೋಡಿರುವೆ ? ( ನಗುವರು. )

**ಹೀರಾ**— ನಿನ್ನದೇ ಯಾತಕ್ಕೆ ನೋಡಲಿಕ್ಕೆ ಬೇಕು. ಈಗಿನ ಪ್ಯಾಸನ್ ಕಾಲದಲ್ಲಿ ಎಲ್ಲಿಯಾದರೂ ನೋಡಲಿಕ್ಕೆ ಸಿಗುವದು. ಅದ ರಂತೆ ನೀನೂ ಎಂದು ಅಂದೆ.

ಕಮಲೆಯ ಆಚೆಯ ಮನೆಯಿಂದ ಪದ್ಮಾ, ಶೀಲಾಳೊಂದಿಗೆ ಕೈ ಬೀಸಾಡುತ್ತ ರತ್ನಾನ ಧ್ವನಿ ಕೇಳಿ ಕಮಲೆಯ ಮನೆಗೆ ಬಂದಳು.

**ಪದ್ಮಾ**— ಏನೇನು ಮಾತುಗಳು ಬಹಳ ಜೋರಿನಿಂದ ನಡೆ ದಿವೆ ಕೈ ಬೀಸುತ್ತ ಎಂದು ಕೇಳಿದೆ. ನಾನೂ ಶೀಲಾ ಕೈ ಬೀಸುತ್ತ ಬಂದೆವು ಅದೇ ಏನು !

**ಹೀರಾ**— ಇಲ್ಲವ್ವಾ, ನಿನ್ನ ಹೆಸರು ತೆಗೆದು ನಾನೆಲ್ಲಿ ಹೆಸ ರುಂಡಿ ಕಟ್ಟಲಿ ? ( ನಗುವರು. )

**ಪದ್ಮಾ**— ಹಾಗಾದರೆ ಇದೇನು ಮಾತು ? ನೀವಿಬ್ಬರೂ ಇಲ್ಲಿ ಬಂದು ಬಹಳ ಹೊತ್ತಾಯಿತೇ ? ನಿಮ್ಮಿಬ್ಬರ ಧ್ವನಿ ಮೇಲಿಂದ ಈಗ ಗೊತ್ತಾಯಿತು.

**ಹೀರಾ**— ಮಾತು ಏನಂದರೆ ರತ್ನಾ ಮತ್ತು ಆಕೆಯ ಗಂಡನು ಕೈ ಬೀಸಾಡುತ್ತ ಶಹರದಲ್ಲಿ ತಿರುಗಾಡುವ ಬಗ್ಗೆ ಮತ್ತು ಈ ಕಮಲಕ್ಕ ನಿಗೇನೋ ಆರಾಮವಿಲ್ಲವಂತೆ. ಇದರ ಬಗ್ಗೆ ಮಾತುಗಳು ನಡೆದಿವೆ. ನಾವೇನು ಬಂದು ಬಹಳ ಹೊತ್ತಾಗಿಲ್ಲ.

**ಪದ್ಮಾ**— ಹೌದೇ ಕಮಲಕ್ಕಾ ಏನು ತಲೆ ನೋಯಿಸುವದೇ?

**ಕಮಲೆ**— ಅದೇನಿಲ್ಲ ನನ್ನ ತಲೆ ಪಲೆ ನೋಯಿಸುವದಿಲ್ಲ. ಆದರೆ ತಲೆಯೊಳಗಿನ ವಿಚಾರಗಳ ಮೂಲಕ ಮನಸ್ಸು ಮಾತ್ರ ಬಹಳ ನೋಯಿಸುತ್ತಿರುವದು.

**ಪದ್ಮಾ**— ಅದಾವ ವಿಚಾರ ನಿನ್ನದು, ಮನಸ್ಸು ನೋಯು ಸುವಂಥದು ?

**ಕಮಲೆ**— ಅದಾವದೆಂದರೆ, ನನ್ನ ಮನಸ್ಸಿನ ಮಂದಿರದೊಳ ಗಿಂದ ಎಷ್ಟೋ ವಿಚಾರ ತರಂಗಗಳು ಹಾಯ್ದು ಹೊರಟವೆ. ಆ ತರಂಗಗಳ ರಂಗವು ಭಾವೀ ತಾಯಿಗಳಾಗುವ ನಮ್ಮ ಭಾರತ ಸ್ತ್ರೀ ಸಮಾಜಕ್ಕೆ ತಿಳಿಯದೇ ಇದ್ದದ್ದೇ ನಾನು ಅರಾಮವಿಲ್ಲದ ವಿರಾಮ ಮೂರ್ತಿಯಂತೆ ಆಗಿದ್ದು.

**ಹೀರಾ**— ರತ್ನಾ ಕಮಲೆಯು ಏನೋ ಒಂದು ದೊಡ್ಡ ಮಾತನ್ನೇ ಹೇಳುತ್ತಾಳಲ್ಲ ! ಏನೇನೋ ತರಗ ಪರಗ ಅನ್ನುತ್ತಾಳಲ್ಲ. ನವರಾತ್ರಿಯಲ್ಲಿ ಮಾಡುವ ತರಗದ ಬಗ್ಗೆ ಮಾತಾಡುವಳೇ ?

**ರತ್ನಾ**— ಹುಚ್ಚೀ ತರಗವಲ್ಲ. ಆಕೆ ಹೇಳುವದು ತರಂಗ. ತರಂಗವೆಂದರೆ ಈಗ ನೋಡು, ಚಿಕ್ಕಂದಿನಲ್ಲಿ ಆಟ, ಸಾಲೆ ಕಲೆಯುವದು, ಮುಂದೆ ಲಗ್ನ. ಮುಂದೆ ಸಂಸಾರ, ಮಕ್ಕಳು ಮರಿ, ಈ ಪ್ರಕಾರ ಸಂಸಾರದಲ್ಲಿ ನಾನಾ ಪ್ರಕಾರ ತಲೆಯಲ್ಲಿ ವಿಚಾರ ಬರುವವೋ ಇಲ್ಲವೋ ?

**ಹೀರಾ**— ಬರುವವು.

**ರತ್ನಾ**— ಅವೇ ಒಂದರ ಮೇಲೊಂದು ಬರುವ ವಿಚಾರಗಳಿಗೆ ವಿಚಾರ ತರಂಗ ಅನ್ನುವರು.

**ಪದ್ಮಾ**— ಕಮಲಕ್ಕಾ ಆ ನಿನ್ನ ವಿಚಾರದ ಸಮಸ್ಯೆಯಾದರೂ ಯಾವದು ?

**ಕಮಲೆ—** ಸಖಿಯರೇ, ಯಾವದೆಂಬದು ಹೇಳುವೆ. ನೀವು ಅದಕ್ಕೆ ಒಪ್ಪಿ ಉತ್ತರ ಕೊಡುವಿರಾ ?

**ಎಲ್ಲರೂ—** ಉತ್ತರ ಕೊಡುವೆವು ಹೇಳು.

**ಕಮಲೆ—** ಹಾಗಾದರೆ ಸ್ತ್ರೀಯುಳ ರತ್ನ ಯಾವದು? ಹೇಳಿರಿ.

**ಹೀರಾ—** ನಿನ್ನದೊಂದು ದೊಡ್ಡ ವಿಚಾರ. ಇದೇ ವಿಚಾರ ತರಂಗವೇ ? ಇವಕ್ಕೇಕೆ ಇಷ್ಟು ಅಸಮಾಧಾನಗೊಂಡಿರುವೆ. ಸ್ತ್ರೀಯರಿಗೆ ರತ್ನಗಳು ಬೇಕಷ್ಟು ಅವೆ. ಮುತ್ತು, ಮಾಣಿಕ, ಬಂಗಾರ, ರತ್ನ, ವಜ್ರ, ವೈಡೂರ್ಯ, ಪದ್ಮರಾಗ ಮಣಿ, ಇವೆಲ್ಲ ಮತ್ತೆಷ್ಟೋ ಹೆಂಗಸರ ಆಭರಣಗಳಲ್ಲವೇ ? ಇವಕ್ಕೇನು ಕಡಿಮೆ. ಶ್ರೀಮಂತರ ಮನೆ ಮನೆಯಲ್ಲಿ ಇರುವವು. ನಮ್ಮಂಥವರ ಹತ್ತಿರ ಏನಿರುವದು ? ಗಂಡನ ಗುರುತಾದ ತಾಳಿಕೊಂಡು ಹೋಗುವ ಎರಡು ತಾಳಿಯ ಹೊರತು, ಮತ್ತೇನಿರುವದು ?

**ಕಮಲೆ—** ಹೀರಾ ಇವೆಲ್ಲ ಸ್ತ್ರೀಯರ ರತ್ನವೇ ? ಅಲ್ಲ. ಅಲ್ಲ. ಇವೆಲ್ಲ ಎಷ್ಟು ಮಾತ್ರಕ್ಕೂ ಅಲ್ಲ. ಸ್ತ್ರೀ ರತ್ನದ ಪ್ರಕಾಶದ ಮುಂದೆ ತನ್ನಷ್ಟಕ್ಕೆ ತನಗೆ ಬೆಳಕು ತೋರಿಸುಕೊಳ್ಳುವ ದೀಪದ ಹುಳದಂತೆ ಇರುವವು.

**ಹೀರಾ—** ಅಂಥ ಬೆಲೆಯುಳ್ಳ ಒಡವೆಗಳೆಲ್ಲ ಸ್ತ್ರೀಯರ ರತ್ನಗಳಲ್ಲದಿದ್ದರೆ ಅವುಗಳ ಹೆಸರಿದ್ದ ನಾನು, ರತ್ನಾ, ಪದ್ಮಾ ಈ ನಾವೆಲ್ಲ ಸ್ತ್ರೀಯ ರತ್ನವೆ.

**ಕಮಲೆ—** ಅಯ್ಯೋ ಮಂಕೇ ನಿಜವಾದ ಅಂಥ ಹೆಸರಿನ ಒಡವೆಗಳೇ ನಾನು ಸ್ತ್ರೀಯು ರತ್ನವಲ್ಲವೆಂದು ಹೇಳುವಾಗ್ಗೆ, ಚಂದಕ್ಕೆ ಅವುಗಳ ಹೆಸರಿಟ್ಟ ಮಾತ್ರಕ್ಕೆ ಜಗದಲ್ಲಿಯ ಸ್ತ್ರೀಯರು ಸ್ತ್ರೀ ರತ್ನವೇ ?

**ಪದ್ಮಾ—** ಕಮಲಕ್ಕಾ ಅದೂ ಅಲ್ಲ ಇದೂ ಅಲ್ಲ ಅನ್ನುವಿ. ಆದರೆ ಅದೆಲ್ಲಿರುವದು ಅದರ ಕಿಮ್ಮತ್ತೇನು ?

**ಕಮುಲೆ**— ಇದೇ ನೋಡು ನಮ್ಮ ಸ್ತ್ರೀ ಸಮಾಜದ ಅಜ್ಞಾನ, ಸ್ತ್ರೀ ರತ್ನ ಎಲ್ಲಿ ಇರುವದೇ ? ಪದ್ಮಾ ಪ್ರತಿಯೊಬ್ಬ ಸ್ತ್ರೀಯ ಹತ್ತಿರ ಇರುವದು. ಶ್ರೀಮಂತ ಬಡವ ಎಂಬೀ ಭೇದವಿಲ್ಲ. ಎಲ್ಲರಲ್ಲಿ ಮೂಲತಾ ಸಮನಾಗಿಯೇ ಇರುವದು. ಆದರೆ ಕೆಲವು ಸ್ತ್ರೀಯರು ಅದನ್ನು ತಮ್ಮ ಮನಸ್ಸಿನ ಸಿಂಹಾಸನದ ಮೇಲೆ ಕೂಡ್ರಿಸಿ, ಜೋಪಾನ ದಿಂದ ಪಾಲನ ಮಾಡುವರು. ಅದರ ಕಿಮ್ಮತ್ತು ಅಷ್ಟಿಷ್ಟು ಇಲ್ಲ. ಅದರ ಗಣನೆ ಮಾಡಲಿಕ್ಕೆ ಬರುವದಿಲ್ಲ.

**ರತ್ನಾ**— ನಮ್ಮೆಲ್ಲರ ಹತ್ತಿರ ಇರುವದೇ ?

**ಕಮುಲೆ**— ಹೌದು.

**ಹೀರಾ**— ಕಿಮ್ಮತ್ತುಳ್ಳ ಅಂಥ ಒಡವೆಗಳನ್ನು ಬಿಟ್ಟು ಅಂಥ ದೇನಿರುವದು ನಮ್ಮಲ್ಲಿ ?

**ರತ್ನಾ**— ಹೀರಾ, ಹಾಗೆ ವಿಚಾರವಿಲ್ಲದೆ ಮಾತನಾಡಬೇಡ. ಅದೇನಿರುವದೆಂಬುದನ್ನು ಕಮುಲೆಯನ್ನು ಸವಿಸ್ತಾರವಾಗಿ ಕೇಳೋಣ.

**ಎಲ್ಲರೂ**:— ಹಾಗಾದರೆ ಕಮುಲಕ್ಕಾ ನಮ್ಮಲ್ಲಿರುವದೇನೆಂಬು ದರ ಬಗ್ಗೆ ಸವಿಸ್ತಾರ ಹೇಳುವಿಯಾ ?

**ಕಮುಲೆ**— ಹೇಳುವದೇನು, ನಮ್ಮೆಲ್ಲರ ಹತ್ತಿರ ಇರುವದೇ ನಂದರೆ ಪರಮ ಪವಿತ್ರವಾದ ಶೀಲ. ಇದೇ ಸ್ತ್ರೀ ರತ್ನ. ಶೀಲ ಅಂದರೆ ಪತಿವ್ರತಾ ನಾರೀಮಣಿಯ ನಾರಿತ್ವಕ್ಕೆ ಶೀಲ ಅನ್ನುವರು. ಇದೇ ಸ್ತ್ರೀಯಳ ರತ್ನ. ಇಂಥ ಪತಿವ್ರತಾ ಸ್ತ್ರೀಯು ತನ್ನ ಗಂಡನನ್ನು ಬಿಟ್ಟು ಉಳಿದ ಪುರುಷ ಸಮಾಜವನ್ನು ತಂದೆ, ಬಂಧುಗಳ ಸಮಾನ ತಿಳಿಯುವಳು. ಇಂಥ ಸ್ತ್ರೀಯಳು ಸಂಸಾರದಲ್ಲಿ ಆಸಕ್ತಿಯಿಂದ ಇರು ವದಿಲ್ಲ. ಪಂಚೇಂದ್ರಿಯ ವಿಷಯ ಸುಖ ತುಚ್ಛವೆಂದು ತಿಳಿಯುವಳು. ಇಂಥ ಸ್ತ್ರೀಯಳ ಕೀರ್ತಿ ಇರುವವರೆಗೆ ಇದ್ದಲ್ಲಿ ಕೀರ್ತಿಯಾಗುವದಲ್ಲದೆ

ಸತ್ತ ಮೇಲೆ ಆತ್ಮನ ಕೂಡ ಹಿಂಬಾಲಿಸಿ ಪುಣ್ಯ ಒಂದವಾಗಿ ಭವ ಭವಗಳಲ್ಲಿ ಸುಖ ಕೊಡುತ್ತ ಮುಂದೆ ಮೋಕ್ಷದ ಮೆಟ್ಟಲ ದಾರಿ ತೋರಿಸುವದು. ಶೀಲ ಅಂದರೆ ಮನಸ್ಸಿನ ನಿಶ್ಚಲ ಪರಿಶುದ್ಧತೆಯೇ ಶೀಲ. ಇಂಥ ಶೀಲ ರತ್ನವೆಂಬೀ ಮುಕ್ತ ಹಾರವನ್ನು ಯಾವಾಕೆ ತನ್ನ ಮನಸ್ಸಿಗೆ ಇಡಿಸಿರುವಳೋ ( ಹಾಕಿರುವಳೋ ) ಆಕೆಯ ಹೊರಗಿನ ನಾಶವಂತ ಶರೀರಕ್ಕೆ ಯಾವವೂ ಶಾಶ್ವತವಾಗಿರದ ಒಡವೆಗಳ ಅಗತ್ಯವೇ ಇಲ್ಲ. ಮತ್ತು ಆಕೆಯು ಇಂಥ ಒಡವೆಗಳ ಆಶೆಯೇ ಮಾಡುವದಿಲ್ಲ. ಆಕೆಯು ಮನಸ್ಸು ಯಾವತ್ತೂ ಸಮಾಧಾನ ಶಾಂತಮಯವಿರುವದು. ತಳಮಳ ಅವಸ್ಥೆಯಲ್ಲಿರುವದಿಲ್ಲ. ಆಕೆಯ ಅಂಗಾಂಗವೆಲ್ಲ, ಆತ್ಮನಲ್ಲಿ ಝಳಕಿಸುವ ಶೀಲ ಪ್ರಕಾಶದಿಂದ ತೇಜಃಪುಂಜ ಕಾಣುವದು. ಅದರಿಂದಲೇ ಅತ್ಯಂತ ಶೋಭಿಸುವಳು. ಶೀಲದ ಕೀರ್ತಿಯು ಮೂರು ಲೋಕದಲ್ಲಿ ಬೆಳಗುವದಲ್ಲದೆ ಆಕೆಯು ದೇವೇಂದ್ರಾದಿ ದೇವಗಳಿಂದ ಪೂಜಿಸಲ್ಪಡುವಳು. ಸೀತೆಯ ಶೀಲ ಪರೀಕ್ಷೆಯ ಸಲುವಾಗಿ ಅಗ್ನಿ ಕುಂಡದಲ್ಲಿ ಆಕೆ ಹಾರಬೇಕಾಯಿತು. ಆಕೆಯ ಶೀಲ ಅತ್ಯಂತ ಪರಿಶುದ್ಧವಿದ್ದದ್ದರಿಂದ, ಅದರಂತೆ ಆಕೆ ವರ್ತಿಸಿದ್ದರಿಂದ ಆ ಅಗ್ನಿಯೆಲ್ಲ ನೀರಾಯಿತು. ಇದಲ್ಲದೆ ದೇವರು ಬಂದು ಸೀತೆಯನ್ನು ಸಿಂಹಾಸನದ ಮೇಲೆ ಕೂಡ್ರಿಸಿ ಪೂಜೆ ಮಾಡಿದರು. ಇದಕ್ಕೆ ಆಕೆಯಲ್ಲಿದ್ದ ಪರಿಶುದ್ಧ ಶೀಲವೇ ಕಾರಣವಲ್ಲದೆ ಮತ್ತೇನು ? ಇದರಂತೆ ನಮ್ಮ ಭಾರತದಲ್ಲಿ ಸೀತೆ, ದ್ರೌಪದಿ, ಲೀಲಾ, ದಮಯಂತಿ, ಅಂಜನಾ, ಅನಂತಮತಿ, ಮೊದಲಾದ ಎಷ್ಟೋ ಸ್ತ್ರೀಯರು, ತಮ್ಮ ಶೀಲದಿಂದ ಶಿಖರಕ್ಕೇರಿ ಸತ್ತು ಸ್ವರ್ಗ ಸೇರಿ ಎಷ್ಟೋ ದಿವಸಗಳಾದರೂ, ಅವರ ಕೀರ್ತಿಯೂ ಅಜರಾಮರವಾಗಿ ಇನ್ನೂವರೆಗೆ ಉಳಿದಿದ್ದ ಕಾರಣವೇನಂದರೆ, ಪವಿತ್ರವಾದ ಶೀಲ ರತ್ನವೇ ಕಾರಣ. ಇದೆಲ್ಲ ಹೊರಗೆ ಇರುವದಿಲ್ಲ. ಮನಸ್ಸಿನಲ್ಲಿಯೇ ಇರುವದು. ಅದರ ಏರು ಇಳಿತ ಚಂಚಲ ಪಣವೂ ಸಹಿತ ಅಲ್ಲೇ ಆಗುವದು. ಹೀಗೆ ಏರಿಳಿತವಾಗಿ ಒಮ್ಮೆ ಮನಸ್ಸಿನ

ನಿಶ್ಚಯ ಸಿಂಹಾಸನದ ಮೇಲೆ ಹತ್ತಿ ಕೂಡುವದೇ ಶೀಲರತ್ನ, (ಸ್ತ್ರೀಯಳ ರತ್ನ) ಆ ಮೇಲೆ ಅಲ್ಲಿಂದ ಕದಲುವದಿಲ್ಲ. ಆತ್ಮ ಸ್ವರೂಪದಲ್ಲಿ ಪರಿಣತಿ ಹೊಂದುತ್ತ ಹೋಗುವದೇ ಆತ್ಮ ಕಲ್ಯಾಣದ ಹೆಗ್ಗುರುತು. ಒಂದೇ ಶೀಲದಿಂದ ಎಷ್ಟೋ ನಾರೀಮಣಿಯರು ತಮ್ಮ, ಪರರ, ದೇಶದ, ರಾಜರ ಸನ್ಯಾಸಿಗಳ, ಮೇಲಿನ ಸಂಕಟಗಳನ್ನು ನಿವಾರಣೆ ಮಾಡಿದ ಕಥೆಗಳು ಅನೇಕ ಇರುವವು. ಸ್ತ್ರೀಯರೆಂದರೆ ಸಾಮಾನ್ಯಳಲ್ಲ, ಸ್ತ್ರೀಯಳ ರತ್ನವೆಂದರೆ ಸಾಮಾನ್ಯವಲ್ಲ. ಸಂಸಾರದಲ್ಲಿದ್ದು ಪರಮಾರ್ಥ ಸಾಧಿಸುವದು. ಇಂಥ ಸ್ತ್ರೀಯರಿಂದ ಹುಟ್ಟಿದ ಮಕ್ಕಳೂ ಸಹಿತ ಶೀಲಯುಕ್ತರಾಗಿ ನೀತಿಯಿಂದ ನೈತಿಕ ಮಟ್ಟಕ್ಕೆ ಮುಟ್ಟಿ ತನ್ನನ್ನು ತಾವು ತಿಳಿದುಕೊಳ್ಳಲಿಕ್ಕೆ ಸಮರ್ಥರಾಗುವರು. ಎಲ್ಲದರಿಂದಲೂ ಶೀಲ ರತ್ನದ ಮಹಿಮೆ ಬಹಳಿರುವದು.

ಶೀಲದಿಂದ ಬಾಹಿರಳಾದ ಸ್ತ್ರೀಯು ಅಂಗವೆಲ್ಲ ಆಭರಣಗಳಿಂದ ಮುಚ್ಚಿದರೂ ಶೋಭೆಯುಕ್ತಳಾಗಿ ಕಾಣುವದಿಲ್ಲ. ಅದು ಹೇಗೆಂದರೆ ಮನಸ್ಸಿನಲ್ಲಿ ಯಾವ ಭಾವವಿರುವದೋ ಅದರ ಪರಛಾಯಿ ಮುಖದ ಮೇಲೆ ಮೂಡುವದು. ಇದಲ್ಲದೆ ಅಂಥ ಸ್ತ್ರೀಯಳಿಗೆ ಆಭರಣಗಳು ವಿರುದ್ಧ ಅಸಹ್ಯ ಕಾಣುವವು. ಅದೇ ಅಂತರಂಗದಲ್ಲಿ ಶೀಲ ರತ್ನ ಹಾರ ಇಡಿಸಿದವಳ ಶರೀರಕ್ಕೆ ಬಹಿರಂಗ ಆಭರಣ ಇಡಿಸಿದರೆ ಮತ್ತಿಷ್ಟು ಶೋಭಿಸುವಳು. ಆದರೆ ಅಂಥವಳಿಗೆ ಬಹಿರಂಗ ಆಭರಣ ಅಗತ್ಯವಿಲ್ಲ. ಮತ್ತು ಇನ್ನೊಂದು ಮಾತೇನಂದರೆ ಪತಿಯನ್ನು ಬಿಟ್ಟು ಪರ ಪುರುಷರ ಕೂಡ ಪ್ರಸಂಗಾವಧಾನದಲ್ಲಿ ಮಾತಾಡುವದು, ಆದರ ಸತ್ಕಾರ ಮಾಡುವದು, ಯಾವದೇ ಸಂಕಟ ಸಮಯದಲ್ಲಿ ಸಹಾಯ ಮಾಡುವದು, ಇವೆಲ್ಲವುಗಳಿಂದ ಶೀಲ ಧರ್ಮಕ್ಕೆ ಯಾವ ಧಕ್ಕೆ ತಗಲುವದಿಲ್ಲ. ನಮ್ಮ ದೇಶದ ಸ್ತ್ರೀಯರು ನೈತಿಕ ಮಟ್ಟದಿಂದ ಮುಂದಾದರೆ ದೇಶದಲ್ಲಿ ಸೌಖ್ಯವುಂಟಾಗುವದು. ಶೀಲ ಶಕ್ತಿಯು ಮುಂದೆ ಯಾವದೇ ಪರವೈರಿಯ ಶಕ್ತಿ ಅಶಕ್ತವಾಗುವದು. ಸ್ತ್ರೀ ಪುರುಷರಿಬ್ಬರೂ ಶೀಲ-

ಭೂಷಿತರಾಗಿದ್ದರೆ ಎಲ್ಲ ತರದಿಂದ ಸುಖ, ಶಾಂತಿ, ಸಿಗುವದಲ್ಲದೆ ಧರ್ಮದಿಂದ ನೀತಿವಂತರಾಗಿ ಕೀರ್ತಿವಂತರಾಗಿ ಮಾನವ ಜನ್ಮ ಸಾರ್ಥಕ ಮಾಡಿಕೊಂಡಂತೆ ಆಗುವದು. ಶೀಲ ರತ್ನದ ವರ್ಣನೆಯನ್ನು ಎಷ್ಟು ಮಾಡಿದರೂ ತೀರದು. ಈಗ ಎಷ್ಟೋ ನಮ್ಮ ಭಗಿನಿಯರು ಅಡ್ಡ ದಾರಿ ಹಿಡಿದು ಶೀಲದಿಂದ ಬಾಹಿರರಾಗಿ ಎಷ್ಟೋ ದುಃಖ ಪಡುವದನ್ನು ನಾನು ಕಣ್ಣಾರೆ ಕಂಡು ಇಂಥ ಕರಣಾ ಜನಕ ಕಥೆಗಳನ್ನು ಎಷ್ಟೋ ಕೇಳಿ ಮನಸ್ಸು ಕಳವಳಗೊಂಡು ನಾನು ಈಗ ಈ ಪ್ರಶ್ನೆ ನಿಮಗೆ ಕೇಳಿದ್ದು ತಿಳಿಯಿತೇ ? ಸ್ತ್ರೀಯಳ ರತ್ನ ಯಾವದೆಂಬುದು ?

**ಎಲ್ಲರೂ**:— ತಿಳಿಯಿತಮ್ಮಾ ನಿನ್ನ ವಿಚಾರ ಅತ್ಯುತ್ತಮವಿರುವದು. ಪರಪುರುಷರ ಸಂಗ ಕೆಟ್ಟ. ಅದು ಅಧರ್ಮ, ಅನೀತಿ. ಇದೆಲ್ಲ ನಮಗೆ ಮೊದಲೇ ಗೊತ್ತು. ಆದರೆ ಕಮಲಕ್ಕಾ ಸ್ತ್ರೀಯಳ ರತ್ನ ಯಾವದೆಂಬುದು ನೀನು ಪ್ರಶ್ನೆ ಕೇಳಿದ್ದು ನಮಗೆ ಗೂಢವಾಯಿತು. ಅದರ ಸವಿಸ್ತಾರ ಈಗ ತಿಳಿಯಿತು. ಆನಂದವಾಯಿತು.

**ಹೀರಾ**— ಕಮಲಾ ನಿನ್ನ ಮಾತು ನಿಜ. ಯಾಕಂದರೆ ನಮ್ಮೂರಲ್ಲಿ ಕುಮಾರಿ ಹುಡುಗಿ ಯಾವನೋ ಅಧಮನಿಂದ ಗರ್ಭಿಣಿಯಾಗಿ ಬಹಳ ತ್ರಾಸದಿಂದ ಸತ್ತು ಹೋದಳು. ಇದೆಲ್ಲ ನೀನು ಹೇಳಿದ ಪ್ರಕಾರ ಅನೀತಿ ಕಾರಣ.

**ಕಮಲೆ**:— ಅನೀತಿಯೇ ಎಲ್ಲ ನಾಶಕ್ಕೆ ಕಾರಣ. ಅನೀತಿಯಿಂದ ನಡೆಯುವ ಮನುಷ್ಯನಲ್ಲಿ ಧರ್ಮ, ಶಾಂತಿ, ಕೀರ್ತಿ, ಮಾನ, ಮರ್ಯಾದೆ ಇವೆಲ್ಲ ಇರುವದಿಲ್ಲ. ಇಂಥವರು ಶ್ರೀಮಂತ, ಪಂಡಿತ, ಜಾಣನಿದ್ದರೂ ಇವರಿಂದ ದೇಶಕ್ಕಾಗಲಿ, ಜನರಿಗಾಗಲಿ, ತನಗಾಗಲಿ, ಯಾವ ಹಿತವಾಗುವದಿಲ್ಲ. ನೀತಿಯಿದ್ದ ಮನುಷ್ಯನಿಂದ ಆಗಬಾರದ ಕೆಲಸ ಆಗುವವು. ಈಗ ನೋಡಿರಿ ಪೂಜ್ಯ ಬಾಪೂಜಿಯವರು ಎಲ್ಲ

ತರದ ನೀತಿಯಿಂದಲೇ ನಗ ನಗುತ್ತ ಅಹಿಂಸಾದಿಂದ ಸ್ವರಾಜ್ಯ ಗಳಿಸಿದ್ದು, ಅಂಥವರ ನೀತಿ ಭೋಧೆಯನ್ನು ಗಾಳಿ ಗೋಪುರವಾಗಿ ಹಾರಿಸಿ ಅಜ್ಞಾನದಿಂದ ಅಂಧಃಕಾರದಲ್ಲಿ ಮುಳಗುವರು. ನೀತಿಯಿಲ್ಲದ ಮನುಷ್ಯನ ಮನುಷ್ಯತ್ವ, ಆಯುಷ್ಯ, ಸಂಸಾರ ಎಲ್ಲ ಹಾಳುವಿದ್ದಂತೆ.

**ಎಲ್ಲರೂ**— ಕಮಲಾ, ನೀನು ಇಷ್ಟೆಲ್ಲ ತಿಳಿಸಿ ಹೇಳಿದ್ದಕ್ಕೆ ನಾವೆಲ್ಲ ಬಹಳ ಉಪಕಾರಿಯಾಗಿರುವೆವು.

**ಕಮಲೆಃ**— ನನ್ನ ಉಪಕಾರ ಬಹಳವಾಗಿದ್ದರೆ ತೀರಿಸಬಲ್ಲಿರಾ?

**ಎಲ್ಲರೂ**— ಹೋ, ಹೋ, ಏನಿದ್ದರೂ ಮಾಡುವೆವು.

**ಕಮಲೆಃ**— ಹಾಗಾದರೆ ನೀವಿದ್ದ ಊರಲ್ಲಿ ಎಲ್ಲ ನಮ್ಮ ಭಗಿನಿಯರಿಗೆ ಶೀಲದಿಂದ ನಡೆಯಲಿಕ್ಕೆ ತಿಳಿಸಿ ಹೇಳಬೇಕು. ಇದರಿಂದ ನನ್ನ ಋಣ ಮುಟ್ಟಿದಂತಾಗುವದು.

**ಎಲ್ಲರೂಃ** – ಅವಶ್ಯ - ಎಲ್ಲರಿಗೂ ಹೇಳುವೆವು.

**ಕಮಲೆಃ**— ಇನ್ನು ನನ್ನ ಆಶಾ ಕಿರಣವು ಕಣ್ಣೆರೆದು ನೋಡುವಂತಾಗಲಿ. ಸಖಿಯರೆ ನನ್ನ ಮನಸ್ಸು ಹಗುರಾಯಿತು.

**ಹಾರೈಕೆಃ**— ಭಾರತ ಭಗಿನಿಯರೆಲ್ಲ ನೀತಿಯ ನೀರುಂಡು ಪಾರಮಾರ್ಥಕ್ಕೆ ಮುಟ್ಟಲಿ.

ಲೇಖಕಿ:— ಸೌ. **ಸುಮಿತ್ರಾದೇವಿ ನೇಮಿನಾಥ**
**ಇಂಚಲ, ಬೆಳಗಾಂವಿ.**



## ಜಿನಸ್ತುತಿ

ಜಿನಜಿನ | ಎನ್ನುತ | ಸವಿಸಿರಿ ನಾಲಿಗೆ | ಭವರೋಗವು ತಾ ಪೋಗುವದು ‖ ಜವದಿಂ ಜಿನಜಿನ | ರವದಿಂ ನುಡಿಯಿರಿ । ನವ ಬೇನೆಯು ತಾ ನಶಿಸುವದು ‖೧‖ ಕಾಡೊಳು ಜಿನ ಜಿನ । ನಾಡೊಳು ಜಿನ ಜಿನ | ಮಾಡಿರಿ ಜಿನ ಜಿನ ಪೂಜೆಯನು ‖ ಆಡುತ ಜಿನ ಜಿನ | ನೋಡುತ ಜಿನ ಜಿನ । ಪಾಡಿರಿ ಜಿನ ಜಿನ ನಾಮುವನು ‖ ೨ ‖ ತಡವನು ಮಾಡದೆ | ಸಡಗರದಿಂದಲಿ । ಪಿಡಿಯಿರಿ ಜಿನ ಜಿನ ಬಕುತಿಯನು ‖ ನುಡಿಯಲಿ ಜಿನ ಜಿನ | ನಡೆಯಲಿ ಜಿನ ಜಿನ । ಪಡೆಯಿರಿ ಜಿನ ಜಿನ ಮುಕುತಿಯನು ‖ ೩ ‖

( ಪೂರ್ವಿ ಆಡತಾಳ )

ಧರ್ಮವ ಹಿಡಿ ಧರ್ಮವ | ಧರ್ಮವ ಬಿಡಬೇಡ ಕರ್ಮಿಷ್ಟನೆ ‖ ಹಿಡಿ ಧರ್ಮವ ಹಿಡಿ ಧರ್ಮವ ‖ಪಲ್ಲ‖ ಘೋರ ವಿಘ್ನದೊಳು ಉಳಿಸೋದು ಧರ್ಮಾ | ಮುಕ್ತಿಯ ಸ್ಥಾನಕೆ ಕಳಿಸೋದು ಧರ್ಮಾ ‖ ೧ ‖ ಲೋಕದಲ್ಲಿ ನಿನ್ನ ಬೆಳಿಸೋದು ಧರ್ಮಾ | ನೀತಿ ಅನೀತಿ ಎಲ್ಲಾ ತಿಳಿಸೋದು ಧರ್ಮಾ ‖ ಧಂ ‖ ೨ ‖ ಅಷ್ಟಕರ್ಮವ ನಷ್ಟ ಮಾಡಿಸೋದು ಧರ್ಮಾ । ನರಕಗತಿ ನಮಗೆ ಬಿಡಿಸೋದು ಧರ್ಮಾ ‖ ೩ ‖ ಸದ್ಗುರು ಮಾರ್ಗಕ್ಕೆ ಕೂಡಿಸೋದು ಧರ್ಮಾ | ಆತ್ಮ ಜ್ಞಾನ ಸದಾ ನಡಿಸೋದು ಧರ್ಮಾ ‖ ಧಂ ‖ ೪ ‖ ಸಂತತಿ ಸಂಪತ್ತಿ ಇರಸೋದು ಧರ್ಮಾ | ದಯಾಗುಣಾ ತನಗೆ ತರವೋದು ಧರ್ಮಾ ‖ ೫ ‖

ಹಿಗ್ಗುವೆ ಯಾಕೋ | ಈ ದೇಹಕ್ಕೆ ‖ ಪ ‖ ಹಿಗ್ಗುತ ತಗ್ಗುತ ಮುಗ್ಗುತ ಕುಗ್ಗುತ । ಅಗ್ನಿಯೊಳಗೆ ದಗ್ಧವಾಗುವ ದೇಹಕ್ಕೆ ‖ ೧ ‖ ಒಂಬತ್ತುದ್ವಾರದಿ | ಮಲಮೂತ್ರಗಳಿಂದ । ನೀರಿಲ್ಲದಿದ್ದರೆ ನಾರುವ ದೇಹಕ್ಕೆ ‖ ೨ ‖ ಏಳುತ್ತ ಬೀಳುತ್ತ ಬಾಳುತ್ತ ಬದಕುತ್ತ | ಹೇಳದೆ ಹೋಗುವ ಹಾಳಾದ ದೇಹಕ್ಕೆ ‖ ೩ ‖ ಆಗಭೋಗಗಳೆಲ್ಲ । ಆಗ

ಮಾಡುತಲಿದೆ | ರೋಗ ಬಂದರೆ ತಾನೋಗುವ ದೇಹಕೆ || ೪ || ನರರ ಸೇವೆಯಮಾಡಿ ನರಕಭಾಜನನಾಗಿ । ಉರುಳಿ ತುರುಳಿ ಬಿದ್ದು ನೆರಳುವ ದೇಹಕ್ಕೆ ||೫|| ಸತಿ ಪತಿಯರು ತಮ್ಮ | ರತಿಕ್ರೀಡೆಯನ್ನಾಡಿ | ಪ್ರಥಮದಿಂದ್ರಿಯದ ಪ್ರತುಮೆಯ ದೇಹಕ್ಕೆ || ೬ || ಪುರುಪರಮೇಶನ | ಚರಣ ಕಮಲಗಳಿಗೆರಗದೆ | ಇರುವಂಥ ಗರ್ವಿಪ ದೇಹಕೆ ||೭||

ನಿನಗೇನು ಬಂತೋಧಾಡಿ, ಜಿನನಾಮವ ಸ್ಮರಿಸೋ ಖೋಡಿ। ಅನುರಾಗದಿಂದ ಕೂಡಿ, ಜಿನದೇವರ ಕೊಂಡಾಡಿ || ಪ || ತನುವಾಸೆ ಬಿಡಲೊಲ್ಲೋಣ, ಜಿನನಾಮವ ಜಪಿಸೋ ಜಾಣಾ। ಮನರೋಗ ರಹಿತ ತ್ರಾಣ, ಜಿನದೇವನು ಪ್ರವೀಣ || ೧ || ಅರಹಂತನನ್ನು ಕೂಗಿ, ದುರಿತವ ಕಳಿಯೋ ಜೋಗಿ । ಸ್ಥಿರಚಿತ್ತದೊಡನೆ ಯೋಗಿ, ಸರಿ ಕಾಣೆ ನಿಮಗೆ ತ್ಯಾಗಿ ||೨|| ಧರೆಯ ಮಂದರಾದ್ರಿ ವಾಸ, ವರ ಚಂದ್ರನೆ ಜಿನೇಶಾ | ಸ್ಥಿರ ಮೋಕ್ಷ ಪಡೆದಿಹ ಈಶ, ನೆರೆನಂಬಿದೆ ಭವನೇಶಾ || ೩ ||

( ಮಂಗಲಮಯ ಪ್ರಥಮ ಜಿನಾ | ಸತತ ಸ್ತುತಿಪೆ ನಾ । )

ಜನ್ಮ ಜರಾ ಜಿತ ಮರಣಾ | ಮನ್ಮಥ ಹತ ಭವ ಹರಣಾ। ಸನ್ಮುನಿ ಸೇವಿತ ಚರಣಾ || ನಾಭಿನಂದನಾ || ೧ || ಪರಮ ಶಾಂತ ಶಶಿವದನಾ | ಹರಿದಿಹೆ ಕಾಲನ ಕದನಾ। ಚಿರಶಾಂತಿ ಸುಖ ಸದನಾ || ವೃಷಭ ಲಾಂಛನಾ ||೨|| ಓಂ ಜ್ಞಾನ ಪ್ರಖರ ಅರುಣಾ। ಸುಜ್ಞಾನ ಸುಖದ ಕಿರಣಾ || ಅಜ್ಞಾನ ತಿಮಿರ ಹರಣಾ || ತಿಲಕ ತ್ರಿಭುವನಾ || ೩ || ಅಷ್ಟಕರ್ಮ ಕೃತ ಶಮನಾ | ದುಷ್ಟ ಕಷಾಯವಿ ದಮನಾ || ಶ್ರೇಷ್ಠ ಮುಕ್ತಿ ಪ್ರಿಯ ರಮಣಾ| ಹೇ ನಿರಂಜನಾ || ೪ || ನುತಿಸುವೆ ಭುವಿತ್ರಯ ಶರಣಾ | ಮತಿದೋರು ಸುಗುಣ ಭರಣಾ || ಸುತೆಯ ಮೇಲಿರಿಸು ಕರುಣಾ। ಹೇ ದಯಾಘನಾ ||೫|| ಮಂಗಲಮಯ ಪ್ರಥಮ ಜಿನಾ | ಸತತ ಸ್ತುತಿಪೆನಾ ||

ಸೌ. ಅಕ್ಕಾತಾಯಿ ತೇ. ಪಾಟೀಲ.

## ಪದ್ಮಾವತಿಯು ಸ್ತುತಿ

ಸುಗುಣ ಸುಜನ ವಂದ್ಯಳೇ ನಮಿಪೆ ಪದುಮಾಂಬೆಯೇ । ಪೊಂಬುಜ ನಿವಾಸಿಯೇ ಹಂಬಲಿಸಿ ಬೇಡುವೆ ವರವನು ಕೊಡು ಮಾತೆಯೇ ಕರವ ಮುಗಿದು ಬೇಡುವೇ ॥ ೧ ॥ ಭವ್ಯ ಜನರ ಭಾವ್ಯಳೆ ಭವದಭಯದ ಭಂಜಳೇ । ಭಕ್ತಿಯಿಂದ ನಮಿಪೆನೂ ಯುಕ್ತಿಯಿಂದ ಕಾಯೆ ನೀ ॥ ೨ ॥ ಕರ್ಮಜನಿತ ಸಂಕಟೂ ಮರ್ಮವರಿದು ದಾಟಿಸೇ। ಜಿನಧರ್ಮವ ನೆಲೆಗೊಳಿಸೇ ಜನನಿ ಪದುಮಾಂಬೆಯೇ ॥ ೩ ॥ ಮಿಥ್ಯಾತ್ವದ ಭಾವವಾ ಸತ್ಯ ತೋರಿ ಬಿಡಿಸೆನೀ। ಸತ್ಯಸನ್ಮಾರ್ಗವಾ ಭಕ್ತಜನಕೆ ತೋರಿಸೇ ॥ ೪ ॥ ನಿನ್ನ ಭಕ್ತ ಜನರಿಗೆ ಧನಧಾನ್ಯವು ಕಡಿಮೆಯೇ । ಕನಿಕರದೀ ಬೇಡುವೇ ಕರುಣಿಸೆನ್ನ ಮಾತೆಯೇ ॥ ೫ ॥ ಬಡವೆ ನಾನು ಕೇಳಮ್ಮಾ ಕಡುಚಿಂತೆ ಯೊಳಿರುತಿಹೇ । ಬಿಡಿಸಿ ಚಿಂತೆಗಳನು ನಿಶ್ಚಿಂತೆ ಮಾಡು ತಾಯಿಯೇ ॥ ೬ ॥ ಬಂಧು ಬಳಗದವರನೂ ಚಂದದಿಂದ ಕಾಯೆ ನೀ । ಕಂದಿ ಕುಂದಿ ನಾನಿಂದು ಬಂದಿರುವೆನು ಮಾತೆಯೇ ॥ ೭ ॥ ಕರುಣಿಸು ನೀ ದೇವಿಯೇ ಕರುಣಾನಿಧಿ ಮಾತೆಯೇ। ಕರಕಮಲವಾ ಮುಗಿದು ನಾ ಚರಣಕೆರಗಿ ಬೇಡುವೇ ॥ ೮ ॥ ಮಾತೆ ನೀನೆ ಪಿತನು ನೀನೆ ನತನಾದೆನು ಮಾತೆಯೇ। ಖತಿಗೊಳಿಸದೆಯನ್ನನು ನೀ ಕ್ಷಿತಿಯೊಳಿಂದು ರಕ್ಷಿಸೇ ॥ ೯ ॥

ನಿಸ್ಸಾರವಿದು ಸಂಸಾರ ಒಂದು ದಿನ ಮಣ್ಣಿಗೆ ಕೂಡುವದು ಒಂದು ದಿನ ಮಣ್ಣಿಗೆ ಕೂಡುವದು ॥ ಪಲ್ಲ ॥

ಹೆಂಡರು ಮಕ್ಕಳು ಪರಿವಾರೆಲ್ಲವು ಮಾಯ ಮೋಹವಿದು ಎನ್ನದು ಎನ್ನದು ಎಂದು ಬೊಗಳಿ ಭೂಮಿಯು ಪಾಲಾದೆ ಒಂದು ದಿನ ಮಣ್ಣಿಗೆ ಕೂಡುವದು ಒಂದು ದಿನ ಮಣ್ಣಿಗೆ ಕೂಡುವದು ॥ ೧ ॥

ಜಗದೊಳಗೆಲ್ಲಾ ಬಗೆ ಬಗೆಯಿಂದಲಿ ಮಾಯಾ ಮೋಹಕೆ ಮೋಸಾಗಲು ನೀ ಬೇಡ ಒಂದು ದಿನ ಮಣ್ಣಿಗೆ ಕೂಡುವದು ಒಂದು ದಿನ ಮಣ್ಣಿಗೆ ಕೂಡುವದು ನಿಸ್ಸಾರವಿದು ಸಂಸಾರ ಒಂದು ದಿನ ಮಣ್ಣಿಗೆ ಕೂಡುವದು ಒಂದು ದಿನ ಮಣ್ಣಿಗೆ ಕೂಡುವದು ॥ ೨ ॥